ನೆಹರೂ ಬಾಲ ಪುಸ್ತಕಾಲಯ

# ತೋಡ ಬಾಲಕ ಮತ್ತು ಕಾಡುಮೇಕೆ

ಇ. ಆರ್. ಸಿ. ದಾವಿದರ್

ಚಿತ್ರಗಳು
ಗೀತಾ ಗಂಗೋಪಾಧ್ಯಾಯ
ಅನುವಾದ
ಜಿ. ಎನ್. ಗುರುಮೂರ್ತಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ



# I

"ಏನದು ಶಬ್ದ?" ಕಾರ್ನೋಜ್ ಚಕಿತನಾಗಿ ಕೇಳಿದ. ಅವನ ನಾಯಿ ಕೂಚ್ ಗುರ್ರಂದಿತು. ಬಾಲಕ ಕಿವಿಗೊಟ್ಟು ಕೇಳಿದ. ಅಂತಯೇ ಅವನ ನಾಯಿಯೂ.

ಪರ್ವತ್ಥದ ತಪ್ಪಲಿನಿಂದ ಅಂತರಿಕ್ಷಕ್ಕೆ ಚಾಚಿದ ಕಿರಿದಾದ ಸ್ಥಳದಲ್ಲಿ ಹುಡುಗ ನಿಂತಿದ್ದ ಮತ್ತು ಅವನ ಬದಿಯಲ್ಲಿ ನಾಯಿ ನಿಂತಿತ್ತು. ಅವರ ಕಾಲುಗಳ ಕೆಳಗಡೆ ಆಳವಾದ ಮತ್ತು ಎದೆ ನಡುಗಿಸುವಂತಹ ಪ್ರಪಾತವಿತ್ತು. ಹುಡುಗ ಕಿವಿಗೊಟ್ಟು ಕೇಳುತ್ತಿದ್ದಂತೆ, ಆ ಕೂಗು ಮತ್ತೆ ಕೇಳಿ ಬಂತು. ಅದು ನೋವಿನ ಕೂಗಾಗಿತ್ತು ಮತ್ತು ಕ್ಷೀಣವಾಗುತ್ತಿತ್ತು. ಬೆಟ್ಟದ ಎರಡು ಪ್ರಪಾತಗಳ ನಡುವಣ ಕಾಡಿನ ಹಾದಿಯಿಂದ ಕೂಗು ಬರುತ್ತಿದೆ ಎಂದು ಕಾರ್ನೋಜನಿಗೆ ತಿಳಿಯಿತು. ಕಾರ್ನೋಜ್ ಶಬ್ದ ಬರುತ್ತಿದ್ದ ಕಡೆಗೆ ಕಲ್ಲುಮಣ್ಣಿನ ಕಿರಿದಾದ ಹಾದಿಯಲ್ಲಿ ವೇಗವಾಗಿ ಓಡಿದ. ಅವನನ್ನು ಕೂಚ್ ಹಿಂಬಾಲಿಸಿತು. ಅವನು ಎಚ್ಚರಿಕೆಯಿಂದ ಕಾಲು ಹಾಕಬೇಕಾಗಿತ್ತು. ಒಂದು ಹೆಜ್ಜೆ ಎಡವಿದರೂ ಆ ಕಿರಿದಾದ ದಾರಿಯ ಪಕ್ಕದ ಪ್ರಪಾತದ ಕೆಳಗೆ ಬೀಳುವ ಅಪಾಯವಿತ್ತು. ಹುಡುಗ ತಲುಪಿದ ಕತ್ತಲೆಯಲ್ಲಿದ್ದ ಕಾಡಿನ ಭಾಗ ಚಿಕ್ಕದಾಗಿತ್ತು, ಅಲ್ಲಿ ತೇವದ ವಾತಾವರಣವಿತ್ತು. ಕಾರ್ನೋಜ್ ಕತ್ತಲಿನಲ್ಲಿ ನಿಧಾನವಾಗಿ ನಡೆಯಬೇಕಾಗಿ ಬಂತು. ಮಂದ ಬೆಳಕಿನಲ್ಲಿ ನೋಡುವುದಕ್ಕೆ ಸಾಧ್ಯವಾದಾಗ ತಂತಿಯ ಬಲೆಯೊಂದರಲ್ಲಿ ನೀಲಗಿರಿ ಕಾಡುಮೇಕೆಯ ಮರಿಯೊಂದು ಸಿಕ್ಕಿಬಿದ್ದದ್ದು ಅವನಿಗೆ ಕಾಣಿಸಿತು. ಈ ಪ್ರಾಣಿ ಕೃಶವಾದ ಕೊನೆಯ ಕೂಗು ಹಾಕಿ, ಒದ್ದಾಡುವುದನ್ನು ನಿಲ್ಲಿಸಿ ಸ್ತಬ್ಧವಾಯಿತು. ಪ್ರಾಣಿ ಸತ್ತಿದೆ ಎಂದು ಕಾರ್ನೋಜ್ ಭಾವಿಸಿದ. ಬಲೆಯ ತಂತಿ ಅದರ ಕತ್ತಿನಲ್ಲಿ ಆಳವಾದ ಗಾಯ ಮಾಡಿತ್ತು ಹಾಗೂ ಅದರಿಂದ ರಕ್ತ ಹರಿಯುತ್ತಿತ್ತು.

ಕಾರ್ನೋಜ್ ಪ್ರಾಣಿಯ ಮೇಲೆ ಮೃದುವಾಗಿ ಕೈಯಾಡಿಸಿದ. ಬೇರೆ ಯಾವ ಗಾಯವೂ ಕಾಣುತ್ತಿರಲಿಲ್ಲವಾದರೂ, ಅದರ ಎದೆ ಜೋರಾಗಿ ಬಡಿದುಕೊಳ್ಳುತ್ತಿದ್ದುದು ಹುಡುಗನಿಗೆ ತಿಳಿಯಿತು. ಅವನು ಪ್ರಾಣಿಯ ಪಕ್ಕದಲ್ಲಿ ಕುಳಿತು ತಂತಿಯ ಬಲೆಯನ್ನು ಮೆಲ್ಲಗೆ ಸಡಿಲಗೊಳಿಸಿದ. ಮರಿ ಮೇಕೆ ವೇಗವಾಗಿ ಉಸಿರಾಡತೊಡಗಿತು. ಕಾರ್ನೋಜ್ ಅದನ್ನು ಒಂದು ಸಣ್ಣ ನೀರಿನ ಒರತೆಯ ಬಳಿ ಎತ್ತಿಕೊಂಡು

ಹೋದ. ಅಲ್ಲಿ ಅದರ ಗಾಯವನ್ನು ತೊಳೆದು ತನ್ನ ಹಿರಿಯರು ಗಾಯಗಳನ್ನು ವಾಸಿ ಮಾಡಲು ಬಳಸುತ್ತಿದ್ದ ಗಿಡಗಳ ಎಲೆಗಳಿಂದ ಗಾಯಕ್ಕೆ ಪಟ್ಟಿ ಹಚ್ಚಿದ.

"ನಮ್ಮ ಕಿರಿಯ ಗೆಳೆಯನನ್ನು ನೋಡಿಕೋ" ಎಂದು ಕಾರ್ನೋಜ್ ತನ್ನ ನಾಯಿಗೆ ಅಪ್ಪಣೆ ಮಾಡಿದ. ನಂತರ ಅವನು ಕಾಡಿನ ಆ ಕಿರಿದಾದ ಭಾಗದಲ್ಲಿ ಬೇರೆ ಯಾವುದಾದರೂ ತಂತಿಯ ಬಲೆಗಳು ಇವೆಯೇ ಎಂದು ಹುಡುಕಿದ. ಇನ್ನೂ ಮೂರು ಬಲೆಗಳು ಇದ್ದವು. ಬೆಟ್ಟದ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಲು ಕಾಡು ಮೇಕೆಗಳು ಬಳಸುವ ಹಾದಿಯಲ್ಲಿ ಜಾಣತನದಿಂದ, ಆದರೆ ದುಷ್ಟ ಉದ್ದೇಶದಿಂದ ಈ ಬಲೆಗಳನ್ನು ಹಾಕಲಾಗಿತ್ತು. ಆ ತಂತಿ ಬಲೆಯನ್ನು ಹಾದು ಹೋಗುವ ಪ್ರಾಣಿಯ ಕತ್ತು ಅಥವಾ ದೇಹವನ್ನು ಬಲೆ ಹಿಡಿಯುತ್ತಿತ್ತು. ಬಲೆಗೆ ಸಿಕ್ಕಿದ ಪ್ರಾಣಿ ಅದರಿಂದ ಬಿಡಿಸಿಕೊಳ್ಳಲು ಒದ್ದಾಡಿದರೆ, ಕುತ್ತಿಗೆಗೆ ಬಿದ್ದ ಉರುಳು ಇನ್ನಷ್ಟು ಬಿಗಿಯಾಗಿ ಪ್ರಾಣಿ ಉಸಿರಾಡಲಾಗದೆ ಸಾಯುತ್ತಿತ್ತು. ಬಲೆಗೆ ಪ್ರಾಣಿಯ ದೇಹ ಅಥವಾ ಕಾಲು ಸಿಕ್ಕಿಬಿದ್ದರೆ, ಆಹಾರವಿಲ್ಲದೆ ಅದು ಸಾಯಬೇಕಾಗುತ್ತಿತ್ತು. ಪ್ರಾಣಿಗಳನ್ನು ಹಿಡಿಯುವ ಕ್ರೂರ ವಿಧಾನ ಇದಾಗಿತ್ತು. ಕಾರ್ನೋಜನಿಗೆ ತುಂಬಾ ಸಿಟ್ಟು ಬಂತು.

ದುಷ್ಟರು ಯಾರು ಎಂಬುದು ಕಾರ್ನೋಜನಿಗೆ ಗೊತ್ತಿತ್ತು. ಕೆಳಗಡೆ ಕಾಡಿನಲ್ಲಿದ್ದ ಗುಡ್ಡಗಾಡಿನ ಜನರೇ ದುಷ್ಟರಾಗಿದ್ದರು. ಅವರು ಬೇಟೆಗಾರರೂ, ಪ್ರಾಣಿಗಳನ್ನು ಬಲೆಗಳಲ್ಲಿ ಕೆಡವುವವರೂ ಆಗಿದ್ದರು. ಇಲ್ಲಿಗೆ ಇವರು ಹೇಗೆ ದಾರಿ ಕಂಡುಕೊಂಡರು ಎಂದು ಕಾರ್ನೋಜನಿಗೆ ಆಶ್ಚರ್ಯವಾಯಿತು. ಬೆಟ್ಟದ ಕಡೆಯಿಂದ ಕೆಳಗಿನ ಕಾಡಿಗೆ ಹೋಗುವ ಯಾವ ದಾರಿಯೂ ಅವನಿಗೆ ಗೊತ್ತಿರಲಿಲ್ಲ. ಆಗ ಅವನಿಗೆ ಕೆಲವು ದಿನಗಳ ಹಿಂದ ಬೆಟ್ಟದ ಮೇಲೆ ಬೇಟೆಗಾರರ ತಂಡವೊಂದನ್ನು ನೋಡಿದ್ದು ನೆನಪಿಗೆ ಬಂತು. ಅವರೇನು ಮಾಡುತ್ತಿದ್ದಾರೆ ಎಂದು ತಿಳಿಯಲು ಅವರನ್ನು ಹಿಂಬಾಲಿಸಿ ಹೋಗಿದ್ದರೆ ಚೆನ್ನಾಗಿತ್ತು ಎಂದು ಅವನಿಗನಿಸಿತು. ಮರಗಳಿಂದ ತಂತಿ ಬಲೆಗಳನ್ನು ಕಿತ್ತು ಯಾರಿಗೂ ಸಿಗದಂತೆ ಅವುಗಳನ್ನು ಬೆಟ್ಟದ ಪಕ್ಕದ ಪ್ರಪಾತಕ್ಕೆ ಕಾರ್ನೋಜ್ ಎಸೆದ.

ಕಾಡುಮೇಕೆಯ ಮರಿ ನೋವಿನಿಂದ ಕೂಗಿದ್ದು ಕಾರ್ನೋಜನಿಗೆ ಮಾತ್ರವಲ್ಲದೆ ಇತರರಿಗೂ ಕೇಳಿಸಿತ್ತು. ಕೆಳಗಡೆ ಕಾಡಿನಲ್ಲಿ ಬೇಟೆಗೆ ಬಂದಿದ್ದ ಬೇಟೆಗಾರರ ಗುಂಪಿಗೆ ಸೇರಿದ ಇಬ್ಬರಿಗೂ ಈ ಕೂಗು ಕೇಳಿಸಿತು. ಅವರು ಬಲೆಗೆ ಬಿದ್ದಿದ್ದ ಪ್ರಾಣಿಯನ್ನು ಹಿಡಿಯಲು ಧಾವಿಸಿದರು.

ಕಾರ್ನೋಜ್ ಬಲೆಗೆ ಬಿದ್ದಿದ್ದ ಕಾಡುಮೇಕೆಯನ್ನು ಕಂಡ ಅರಣ್ಯದ ಕಿರಿದಾದ ಭಾಗದ ಒಂದು ತುದಿಯಲ್ಲಿ ಏನೂ ಇರಲಿಲ್ಲ. ತಮ್ಮ ಬಲೆಗಳಿಗೆ ಬೇಟೆಗಾರರು ಹೇಗೆ ಹೋಗುತ್ತಾರೆ ಎಂದು ಯೋಚಿಸುತ್ತಾ ಕಾರ್ನೋಜ್ ಹಾಗೇ ನಿಂತ. ಅವನು ಎಚ್ಚರಿಕೆಯಿಂದ ಮುಂದೆ ನಡೆದು ತುದಿಯಲ್ಲಿ ನಿಂತು ನೋಡಿದ. ಅವನ ಕಾಲಡಿಯಲ್ಲಿ ಗಿಡಗಳ ಕಾಂಡಗಳನ್ನು ಚೆನ್ನಾಗಿ ಗಂಟು ಹಾಕಿ ಮಾಡಿದ ಹಗ್ಗ ಇತ್ತು. ಅದರ ತುದಿ ಕೆಳಗಡೆಯ ಕಾಡಿನವರೆಗು ಹೋಗಿತ್ತು. ಬೆಟ್ಟದ ಇಳಿಜಾರಿನ ಈ ಭಾಗದಲ್ಲಿ ಅದು ಬಹಳ ದೂರವೇನಿರಲಿಲ್ಲ. ಕಾರ್ನೋಜ್ ನೋಡುತ್ತಿದ್ದಂತೆ, ಹಗ್ಗ ಹಾವಿನಂತೆ ಅಲ್ಲಾಡಲಾರಂಭಿಸಿತು. ಸರಿಯಾಗಿ ನೋಡಲು ಅವನು

ಮುಂದಕ್ಕೆ ಬಗ್ಗಿ ನೋಡಿದ. ಹಾಗೆ ಬಗ್ಗಿದಾಗ ಅವನು ಕೆಳಗಡೆ ಬಿದ್ದೇ ಬಿಡುತ್ತಿದ್ದನೇನೋ ಎನ್ನುವ ಹಾಗಾಯಿತು. ಹಗ್ಗ ಹಿಡಿದು ಈ ಬೇಟೆಗಾರರು ಪ್ರಪಾತದ ಅಂಚಿನಲ್ಲಿ ಮೇಲೆ ಬರುತ್ತಿದ್ದರು. ಒಬ್ಬನಂತೂ ಇನ್ನೇನು ಮೇಲೆ ಹತ್ತುವುದರಲ್ಲಿದ್ದ. ಅವನ ಕೈ ಬೆರಳುಗಳು ಸರಿಯಾದ ಹಿಡಿತಕ್ಕಾಗಿ ತಡಕಾಡುತ್ತಿದ್ದವು. ಹುಡುಗ ಏನೂ ಮಾಡದಂತೆ ಬೆದರಿಸಲು ಅವನು ಹುಡುಗನ ಕಣ್ಣುಗಳನ್ನೇ ತೀಕ್ಷ್ಣವಾಗಿ ದಿಟ್ಟಿಸಿ ನೋಡಿದ. ಕಾರ್ನೋಜನ ರಕ್ತ ಹೆಪ್ಪುಗಟ್ಟಿದಂತಾಯಿತು. ಕೂಡಲೇ ಅವನಿಗೆ ತನ್ನ ಕೈಯಲ್ಲಿದ್ದ ಮರ ಕಡಿಯುವ ಕತ್ತಿಯ ನೆನಪಾಯಿತು. ಹಗ್ಗವನ್ನು ಕತ್ತರಿಸುವವನಂತೆ ಅವನು ಹಗ್ಗದ ಮೇಲೆ ಕತ್ತಿಯನ್ನಿಟ್ಟ. ಹೆದರುವ ಸರದಿ ಈಗ ಬೇಟೆಗಾರನದಾಯಿತು. ತನ್ನೊಂದಿಗಿದ್ದ ಬೇಟೆಗಾರನಿಗೆ ಹುಷಾರಿ ಹೇಳಿದವನೇ ಅವನು ಹಗ್ಗದಿಂದ ಅದಷ್ಟು ಬೇಗ ಸರ್ರನೆ ಇಳಿಯತೊಡಗಿದ. ಅವರು ಭೂಮಿಯಿಂದ ಸುಮಾರು ಹನ್ನೆರಡು ಅಡಿ ಎತ್ತರಕ್ಕೆ ಹೋಗುವವರೆಗೆ ಕಾದ ಕಾರ್ನೋಜ್ ನಂತರ ಹಗ್ಗವನ್ನು ಕತ್ತರಿಸಿದ. ಅವರು ಕೆಳಗೆ ಬೀಳುತ್ತಿದ್ದಂತೆ, ಅವನು ಅವರಿಗೆ ಎಚ್ಚರಿಕೆ ನೀಡಿದ – "ಇದರಿಂದ ಪಾಠ ಕಲಿಯಿರಿ!"

ಸಮತಟ್ಟಾದ ಆ ಅರಣ್ಯ ಭಾಗವನ್ನು ತಲುಪಲು ಕಳ್ಳ ಬೇಟೆಗಾರರು ಆ ಸಮೀಪದ ದಾರಿಯನ್ನು ಮತ್ತೆ ಬಳಸಲು ಸಾಧ್ಯವಾಗದಂತೆ ಕಾರ್ನೋಜ್ ಹಗ್ಗದ ಏಣಿಗೆ ಆಸರೆಯಾಗಬಹುದಾದ ಮರಗಿಡಗಳನ್ನು ಕತ್ತರಿಸಿ ಹಾಕಿದ. ಅವನು ಈ ಕೆಲಸದಲ್ಲಿ ತೊಡಗಿದ್ದಾಗ ಕಾಡುಮೇಕೆಯ ಮರಿಗೆ ಪ್ರಜ್ಞೆ ಬಂತು. ಅದು ಕಣ್ಣು ತೆರೆದಾಗ, ಕಂಡಿದ್ದಾದರೂ ಏನು? ತನ್ನನ್ನೇ ದಿಟ್ಟಿಸಿ ನೋಡುತ್ತಿದ್ದ ಭಯಂಕರವಾಗಿ ಕಾಣಿಸುತ್ತಿದ್ದ ಟೊಣಪ ನಾಯಿ! ಮೇಕೆ ಮರಿಗೆ ಭಯ ಆವರಿಸಿತು. ಸತ್ತಂತೆ ಬಿದ್ದಿರುವುದೇ ಅತ್ಯಂತ ಉತ್ತಮ ಎಂದು ಅದು ನಿರ್ಧರಿಸಿತು. ಕೆಲವು ಕಾಡುಪ್ರಾಣಿಗಳು ಅನುಸರಿಸುವ ತಂತ್ರ ಇದೇ. ಕಾರ್ನೋಜ್ ಹಿಂದಿರುಗವವರೆಗೆ ಅದು ಅಲ್ಲಾಡದೆ ಮಲಗಿತ್ತು.



# II

ಭಾರತದ ನೈಋತ್ಯ ಕರಾವಳಿಗೆ ಸಮಾನಾಂತರವಾಗಿ ಹಬ್ಬಿರುವ ಪಶ್ಚಿಮ ಘಟ್ಟಗಳ ಶ್ರೇಣಿಯ, ಅಂಗದಂತಿವೆ ನೀಲಗಿರಿ ಪರ್ವತಗಳು. ಬಯಲಸೀಮೆಯ ಜನರಿಗೆ, ಪರ್ವತಗಳು ಅವರ ಜೀವನದ ಪ್ರಭಾವಶಾಲಿ ಅಂಶವಾಗಿದ್ದವು. ಮಳೆ ಬೀಳುವುದಕ್ಕೆ, ಮಳೆ ನೀರಿನಿಂದ ನದಿ, ಹೊಳೆಗಳು ಹರಿದು ಸರೋವರಗಳು ತುಂಬುವುದಕ್ಕೆ ಅವು ನೆರವಾಗುತ್ತವೆ. ಆದರೋ ಈ ಪರ್ವತಗಳು ನಿಗೂಢವಾಗಿವೆ. ಅವುಗಳ ತಳದ ಸುತ್ತಲೂ ಅಗಲವಾಗಿ ಹಬ್ಬಿದ ದಟ್ಟ ಅರಣ್ಯ, ಕಾಡುಪ್ರಾಣಿಗಳ ಭಯ ಮತ್ತು ಮಲೇರಿಯಾದಂತಹ ಭಯಾನಕ ರೋಗದಿಂದಾಗಿ ಜನರು ಈ ಪರ್ತತಗಳಿಂದ ದೂರವಿದ್ದರು. ದೂರದಿಂದ ನೋಡಿದಾಗ ಎತ್ತರದಲ್ಲಿರುವ ಬಹುತೇಕ ಪರ್ವತಗಳು ನೀಲಿಯಾಗಿ ಕಾಣುತ್ತವೆ. ನೀಲಗಿರಿ ಪರ್ವತಗಳು ಕಡು ನೀಲಿ ಬಣ್ಣದವು. ಅವುಗಳನ್ನಾವರಿಸಿರುವ ಮಂಜು ದಟ್ಟವಾಗಿರುವುದೇ ಅದಕ್ಕೆ ಕಾರಣವಿರಬಹುದು. ಆದರಿಂದಾಗಿ ಬಯಲು ಸೀಮೆಯ ಜನರು ಈ ಪರ್ವತಗಳನ್ನು ನೀಲಗಿರಿ ಎಂದು ಕರೆದರು. ಅದು ಇಂಗ್ಲಿಷರ ಬಾಯಲ್ಲಿ ನೀಲ್ಗಿರೀಸ್ ಎಂದಾಯಿತು.

ಗುಡ್ಡಗಾಡಿನ ಜನರೂ ಸಹ ಪರ್ವತಗಳಿಗೆ ಅಂಟಿಕೊಂಡು ಪ್ರತ್ಯೇಕವಾಗಿಯೇ ಉಳಿದಿದ್ದರು. ಸಾಹಸಿ ಮನೋಭಾವದ ಇಂಗ್ಲಿಷರೇ ನೀಲಿ ಮಂಜನ್ನು ಭೇದಿಸಿ ನೀಲಗಿರಿ ಪರ್ವತಗಳ ತಂಪು ವಾತಾವರಣ, ಸೌಂದರ್ಯ ಮತ್ತು ಗಾಂಭೀರ್ಯವನ್ನೂ, ಅವುಗಳ ವಿಶಿಷ್ಟ ವನ್ಯಜೀವನವನ್ನೂ ಕಂಡುಹಿಡಿಯಬೇಕಾಯಿತು. 1820ರ ದಶಕದಲ್ಲಿ ಇಂಗ್ಲಿಷರು ಈ ಶೋಧ ಮಾಡಿದರು. ಆ ನಂತರ ನೀಲಗಿರಿ ಬೃಹತ್ ಅರಣ್ಯ ಯಾರೂ ಕಾಲಿಡಲಾಗದ ಸ್ಥಳವಾಗಿ ಉಳಿಯಲಿಲ್ಲ.

ಬಯಲು ಸೀಮೆಯಿಂದ ಎರಡು ಸಾವಿರ ಮೀಟರ್ ಎತ್ತರಕ್ಕೆ ಚೂಪಾಗಿ ಎದ್ದು ನಿಂತ ನೀಲಗಿರಿ ಪರ್ವತ ಹಸಿರು ಹಾಸಿದ ಬೆಟ್ಟಗಳ ದೊಡ್ಡ ಪ್ರಸ್ಥಭೂಮಿಯಾಗಿ ಹರಡಿದೆ. ಇಂಗ್ಲಿಷರು ಇಂಗ್ಲೆಂಡ್‌ನ ದಕ್ಷಿಣದಲ್ಲಿರುವ 'ಡೌನ್ಸ್'ನ ಹೆಸರನ್ನು ನೀಲಗಿರಿ ಪರ್ವತಗಳ ಕೆಲವು ಭಾಗಗಳಿಗೆ ಇಟ್ಟರು. ಮೂಲತಃ ನೀಲಗಿರಿಯ ಎತ್ತರದ ಸಮತಲ ಪ್ರದೇಶ ಅಲ್ಲಲ್ಲಿ ನಿತ್ಯಹರಿದ್ವರ್ಣದ ಕಾಡುಗಳಿಂದ ಕೂಡಿದ ಅನೇಕ ಇಳಿಜಾರುಗಳ

ಪ್ರದೇಶವಾಗಿತ್ತು. ಈ ಕಾಡುಗಳನ್ನು 'ಶೋಲಗಳು' ಎಂದು ಕರೆಯುತ್ತಾರೆ. ಈ ಸಮತಲ ಪ್ರದೇಶ ಪಶ್ಚಿಮದತ್ತ ಸೌಮ್ಯವಾಗಿ ವಾಲಿ ಅಲ್ಲಿ ಒಂದು ವಿಶಿಷ್ಟ ಪರ್ವತಶ್ರೇಣಿಯಾಗಿ ರೂಪುಗೊಂಡಿದೆ. ಅನೇಕ ಶಿಖರಗಳು ಈ ಪರ್ವತಶ್ರೇಣಿಯನ್ನು ಗುರುತಿಸುವುದಕ್ಕೆ ನೆರವಾಗುತ್ತವೆ. ಈ ಪರ್ವತಶ್ರೇಣಿಗೆ ಕುಂಧಾಸ್ ಎನ್ನುತ್ತಾರೆ. ಇದು ದಟ್ಟವಾದ ಮತ್ತು ದುರ್ಗಮವಾದ ಪ್ರದೇಶ. ಇದು ಕಾಡುಮೇಕೆಗಳ ನಾಡು. ಇದು ಸ್ಥಳೀಯ ಆದಿವಾಸಿಗಳಾದ ತೋಡರ ನಾಡೂ ಹೌದು. ಕಾರ್ನೋಜ್ ಈ ತೋಡರ ಜನಾಂಗಕ್ಕೆ ಸೇರಿದವನು. ಇನ್ನಷ್ಟು ಪಶ್ಚಿಮಕ್ಕೆ ಹೋದರೆ ಸಮತಲ ಪ್ರದೇಶ ತಟಕ್ಕನೆ ಅನೇಕ ಪ್ರಪಾತಗಳೊಂದಿಗೆ ಬಯಲು ಸೀಮೆಯಲ್ಲಿ ಕೊನೆಗೊಳ್ಳುತ್ತದೆ. ಪಶ್ಚಿಮದ ಬಯಲು ಸೀಮೆಯಿಂದ ನೋಡಿದಾಗ, ನೀಲಗಿರಿ ಪರ್ವತಗಳು ಒಂದು ದೈತ್ಯಾಕಾರದ ಕೋಟೆಯಂತೆ ಕಾಣಿಸುತ್ತವೆ.

ತೋಡರ ನಾಡು ಸುಂದರವಾದ, ಮನೋಹರವಾದ ನಾಡು. ಆದರೆ ಇದು ಸದಾ ಸಂತೋಷ ಹಾಗೂ ಸಂಭ್ರಮದಿಂದ ಇರುವ ನಾಡಲ್ಲ. ಇಲ್ಲಿ ಪರಿಸ್ಥಿತಿ ಬಹಳ ಕಠಿಣವೂ, ಕಠೋರವೂ ಆಗಬಲ್ಲುದು. ಜೂನ್‌ನಲ್ಲಿ ನೈಋತ್ಯ ಮುಂಗಾರು ಪ್ರಾರಂಭವಾದಾಗ ಬಿರುಗಾಳಿ ಎರಡು ತಿಂಗಳಿಗೂ ಹೆಚ್ಚು ಕಾಲ ಪ್ರಸ್ಥಭೂಮಿಯಲ್ಲಿ ಬೀಸುತ್ತದೆ. ಈ ಮುಂಗಾರಿನ ಪ್ರಭಾವದಿಂದ ತಣ್ಣನೆಯ ಜಡಿ ಮಳೆ ಸತತವಾಗಿ ಬೀಳುತ್ತದೆ. ಆದರೆ ತೋಡರಿಗೆ ಮುಂಗಾರು ಬಹಳ ಇಷ್ಟ. ಏಕೆಂದರೆ ಅದು ಅವರಿಗೆ ಜೀವನಾಧಾರವಾದ ನೀರನ್ನು ಕೊಡುತ್ತದೆ. ತಮ್ಮ ಹಾಡುಗಳಲ್ಲಿ ಅವರು ಮುಂಗಾರನ್ನು ಪ್ರೀತಿಯಿಂದ ನೆನೆಯುತ್ತಾರೆ:

"ಮಗುವಿನಂತೆ ಆಡುತಾಡುತ<br>
ಮುಂಗಾರಿನ ಮಳೆ ತೋಸ್ ಪರ್ವತದಿಂದ ಬರುತಿದೆ<br>
ಕರುವಿನಂತೆ ಕುಣಿದಾಡುತ ಪೈಕಾರ ನದಿ ಬರುತಿದೆ<br>
ಬಾಳೆಯ ಕೊಳವಿಯನು ಗಾಳಿ ನುಡಿಸುತಿದೆ<br>
ಹಲಸಿನ ಮರದ ನಗಾರಿಯನು ನದಿ ಬಾರಿಸುತಿದೆ<br>
ಎಲ್ಲ ನಾಲ್ಕು ದಿಕ್ಕುಗಳಿಂದ ಗಾಳಿ ಆಡುತಿದೆ<br>
ನಾಗರಹಾವಿನಂತೆ ನದಿ ಕುಣಿಯುತಿದೆ."

ಸ್ವಲ್ಪ ವಿರಾಮದ ನಂತರ, ವಿಪರೀತ ಮಳೆ ಬರಿಸುವ ಈಶಾನ್ಯ ಮುಂಗಾರು ಪ್ರಾರಂಭವಾಗುತ್ತದೆ. ಈ ಮುಂಗಾರಿನ ನಂತರ ಹೆಪ್ಪುಗಟ್ಟಿಸುವ ಚಳಿಗಾಲ ಪ್ರಾರಂಭವಾಗುತ್ತದೆ.

ಕಾರ್ನೋಜ್ ಮತ್ತು ತೋಡರ ಜೀವನ ಶೈಲಿ, ವಿಧಾನಗಳು ಈ ವಾತಾವರಣಕ್ಕೆ ಹೊಂದಿಕೊಂಡಿದ್ದವು. ಬಯಲು ಸೀಮೆಯ ಕೊಪ್ಪಲುಗಳಂತಿರುವ 'ಮಂಡ್'ಗಳಲ್ಲಿ ತೋಡರು ವಾಸಿಸುತ್ತಾರೆ. ಒಂದು ಮಂಡ್‌ನಲ್ಲಿ ಸಾಮಾನ್ಯವಾಗಿ ಮೂರರಿಂದ ನಾಲ್ಕು ಗುಡಿಸಲುಗಳಿರುತ್ತವೆ. ವಾಸ್ತುಶಿಲ್ಪದ ದೃಷ್ಟಿಯಿಂದ ಆಕರ್ಷಕವಾಗಿ ಕಾಣುವ ಈ ಗುಡಿಸಲುಗಳು ನೀಲಗಿರಿ ವಾತಾವರಣಕ್ಕೆ ಚೆನ್ನಾಗಿ ಹೊಂದಿಕೊಳ್ಳುತ್ತವೆ.

ತೋಡ ಗುಡಿಸಲು ಉದ್ದುದ್ದವಾಗಿ ಅರ್ಧಕ್ಕೆ ಕತ್ತರಿಸಿದ ಪೀಪಾಯಿಯನ್ನು ಹೋಲುತ್ತವೆ ಹಾಗೂ ಎತ್ತಿನ ಗಾಡಿಯೊಂದಕ್ಕೆ ಹೊದಿಸಿದ ಅರ್ಧ ವೃತ್ತಾಕಾರದ ಛಾವಣಿಯಂತೆ ಕಾಣುತ್ತವೆ. ಒಂದು ಪುಟ್ಟ ಬಾಗಿಲಿನಿಂದ ಮಾತ್ರ ಗುಡಿಸಲಿಗೆ ಪ್ರವೇಶ. ಬಗ್ಗಿ ಕೈಕಾಲುಗಳಿಂದ ತೆವಳುತ್ತಾ ಬಾಗಿಲಿನಿಂದ ಒಳಗೆ ಹೋಗಬೇಕು. ಗುಡಿಸಲಿನ ಒಳಗಡೆ ಒಂದು ಬದಿಯಲ್ಲಿ ಮಣ್ಣಿನಿಂದ ಗಟ್ಟಿಯಾಗಿ ಮಾಡಿರುವ ಜಗಲಿ. ಅದು ಕೂಡುವ, ಮಲಗುವ ಸ್ಥಳ. ಅದರ ಎದುರಿಗೆ ಹಾಗೂ ಹಿಂದುಗಡೆಗೆ ಒಲೆ ಇರುತ್ತದೆ. ಛಾವಣಿ ಬಿದಿರು ಮತ್ತು ಬೆತ್ತದಿಂದ ಅಚ್ಚುಕಟ್ಟಾಗಿ ಹೆಣೆದು, ಹುಲ್ಲು ಹೊದಿಸಿದುದಾಗಿರುತ್ತದೆ. ಗುಡಿಸಲು ಮೈ ಕೊರೆಯುವ ಚಳಿಗಾಲದಲ್ಲಿ ಬೆಚ್ಚಗೂ, ಬೇಸಿಗೆಯಲ್ಲಿ ತಂಪಾಗಿಯೂ ಇರುತ್ತದೆ. ದುಂಡಗಿರುವ ಛಾವಣಿಯಿಂದಾಗಿ ರೊಯ್ಯೆಂದು ಬೀಸುವ ಮುಂಗಾರು ಗಾಳಿ ಯಾವುದೇ ಪ್ರತಿರೋಧವಿಲ್ಲದೆ ಹಾದು ಹೋಗುತ್ತದೆ ಹಾಗೂ ನೀರು ಬೇಗ ಹರಿದು ಹೋಗುತ್ತದೆ. ಗುಡಿಸಿಲುಗಳನ್ನು ಕಟ್ಟಬೇಕಾದ 'ಮಂಡ್'(ತೋಡರ ಭಾಷೆಯಲ್ಲಿ 'ಮಾಡ್') ಸ್ಥಳಗಳನ್ನು ಎಚ್ಚರಿಕೆಯಿಂದ ಆರಿಸಲಾಗುತ್ತದೆ. ತಣ್ಣನೆಯ ಗಾಳಿ ಬೀಸದ, ನೀರಿನ ಒರತೆಗಳಿಗೆ ಸಮೀಪವಾದ, ಎದುರಿಗೆ ಆಕರ್ಷಕವಾದ ದೃಶ್ಯಗಳಿರುವ ಹಾಗೂ ತಮ್ಮ ಎಮ್ಮೆಗಳಿಗೆ ಸಾಕಷ್ಟು ಹುಲ್ಲುಗಾವಲಿರುವಂತಹ ಸ್ಥಳಗಳನ್ನು ಆರಿಸಲಾಗುತ್ತದೆ.

ಕಾಡುಮೇಕೆ ಮರಿಯನ್ನು ಮನೆಗೆ ಕರೆದುಕೊಂಡು ಹೋದಾಗ ಅದಕ್ಕೆ ಹಿರಿಯರ ಪ್ರತಿಕ್ರಿಯೆ



ಏನಿರುತ್ತದೆಂಬ ಬಗ್ಗೆ ಕಾರ್ನೋೕಜನಿಗೆ ಸ್ಪಷ್ಟವಾಗಿ ತಿಳಿದಿರಲಿಲ್ಲ. ದಿಕ್ಕುಗಾಣದ ಪ್ರಾಣಿಗಳನ್ನು ಮನೆಗೆ ಕರೆದುಕೊಂಡು ಹೋಗುವುದು ಅವನಿಗೆ ಅಭ್ಯಾಸವಾಗಿತ್ತು. ತೋಡರಿಗೆ ಕಾಡುಪ್ರಾಣಿಗಳೆಂದರೆ ಪ್ರೀತಿ, ಅವುಗಳಿಗೆ ಅವರು ಏನೂ ತೊಂದರೆ ಮಾಡುತ್ತಿರಲಿಲ್ಲ. ಕಾಡುಪ್ರಾಣಿಗಳೂ ಅರಣ್ಯಗಳಲ್ಲಿರುವುದನ್ನೇ ಅವರು ಇಷ್ಟ ಪಡುತ್ತಿದ್ದರು. ತನ್ನ ಕೊಪ್ಪಳವಾದ ಮೋಫ್‌ಮಂಡ್‌ಗೆ ಕಾರ್ನೋೕಜ್ ಯಾವುದಾದರೂ ಪ್ರಾಣಿಯನ್ನು ಕರೆದುಕೊಂಡು ಹೋದಾಗಲೆಲ್ಲಾ – ಚಿರತೆಗೆ ಬಲಿಯಾದ ತಾಯಿಯನ್ನು ಕಳೆದುಕೊಂಡಿದ್ದ ಜಿಂಕೆಯ ಮರಿಯನ್ನು ಕರೆತಂದದ್ದು ಇತ್ತೀಚಿನದಾಗಿತ್ತು – ಅದನ್ನು ವಾಪಸು ಅದು ಇದ್ದಲ್ಲಿಗೇ ಒಯ್ದು ಬಿಟ್ಟು ಬರುವಂತೆ ಅವನಿಗೆ ಹೇಳಲಾಗುತ್ತಿತ್ತು. ಕೂಚ್‌ನನ್ನು ಸಾಕುತ್ತಿರುವುದಕ್ಕೂ ಸಾಕಷ್ಟು ವಿರೋಧವಿತ್ತು. ಕಾಡುಮೇಕೆಯ ಮರಿಯೊಂದಿಗೆ ಕಾರ್ನೋೕಜ್ ಮನೆ ಸೇರಿದಾಗ, ಅವನ ಅಮ್ಮ ತಕರಾರು ಮಾಡಿದಳು. ಇನ್ನೊಂದು ಸಾಕುಪ್ರಾಣಿಯ ಕಾಟ ಅವರಿಗೆ ಬೇಕಿರಲಿಲ್ಲ. ಮರಿಯ ಕತ್ತಿನ ಮೇಲಿನ ಗಾಯವನ್ನು ಕಾರ್ನೋೕಜ್ ಅಮ್ಮನಿಗೆ ತೋರಿಸಿ, "ಈ ಮರಿಯನ್ನು ನಾನು ನರಿಗಳಿಗೆ ತಿನ್ನಿಸಬೇಕೆಂದು ನಿನ್ನ ಇಷ್ಟವೇ?" ಎಂದು ಕೇಳಿದ.

"ನೀನು ಮರಿಯನ್ನು ಇಟ್ಟುಕೊಳ್ಳಬೇಕಾದರೆ ಹಿರಿಯರ ಅನುಮತಿ ಪಡೆದುಕೋ" ಎಂದು ಅವನ ತಾಯಿ ಅಪ್ಪಣೆ ಮಾಡಿದಳು.

ಕಾರ್ನೋೕಜ್‌ನಿಗೆ ಕೂಡಲೇ ಮಂಡ್‌ನ-ದೂರದ ತುದಿಯಲ್ಲಿದ್ದ ಕೋಡನ್‌ನ ನೆನಪಾಯಿತು. ಅವನು ದಯಾವಂತ ಹಾಗೂ ತಿಳುವಳಿಕೆಯ ಅಜ್ಜನಾಗಿದ್ದ. ಕಾರ್ನೋೕಜ್ ಅವನ ಬಳಿಗೆ ತೆರಳಿ, ತೋಡರು ಅದರಲ್ಲೂ ತೋಡ ಹೆಂಗಸರು ಹಿರಿಯರನ್ನು ಭೇಟಿಯಾದಾಗ ನಡೆದುಕೊಳ್ಳುವ ಸಂಪ್ರದಾಯಕ್ಕೆ ತಕ್ಕಂತೆ ನಮಸ್ಕಾರ ಮಾಡಿದ. ಹುಡುಗ ಕೋಡನ್‌ನ ಮುಂದೆ ಮಂಡಿಯೂರಿ ಕುಳಿತು ತಲೆ ಬಗ್ಗಿಸಿದ. ಅಜ್ಜ ಮೊದಲು ತನ್ನ ಬಲಗಾಲನ್ನೆತ್ತಿ ಕಾರ್ನೋೕಜನ ಹಣೆಯ ಮೇಲೆ ಮೃದುವಾಗಿ ಮುಟ್ಟಿಸಿದ. ನಂತರ ಎಡಗಾಲನ್ನು ಹಣೆಗೆ ಸೋಕಿಸಿದ. ಹೀಗೆ ಗೌರವ ತೋರಿಸಿದ ಮೇಲೆ ಕಾಡುಮೇಕೆಯ ಮರಿಯನ್ನು ತಾನು ಕಾಪಾಡಿದ ಬಗ್ಗೆ ಕಾರ್ನೋೕಜ್ ಕೋಡನ್‌ಗೆ ತಿಳಿಸಿದ. ತೋಡರು ಮತ್ತು ಕಾಡುಮೇಕೆಗಳು ನೀಲಗಿರಿ ಪ್ರಸ್ಥಭೂಮಿಯಲ್ಲಿ ಶತಮಾನಗಳಿಂದ ಜೀವಿಸುತ್ತಿದ್ದರೂ ಈ ಎರಡೂ ಜೀವಿಗಳ ನಡುವೆ ನಿಕಟ ಸಂಪರ್ಕ ಉಂಟಾಗಿರಲಿಲ್ಲ. ಹುಡುಗ ಕಾಡುಮೇಕೆಯ ಮರಿಯನ್ನು ಉಳಿಸಿಕೊಳ್ಳಲು ತುಂಬ ಉತ್ಸುಕನಾಗಿದ್ದುದನ್ನು ಕಂಡ ಕೋಡನ್‌ಗೆ ಅವನಿಗೆ ನಿರಾಶೆ ಉಂಟು ಮಾಡಲು ಮನಸ್ಸಾಗಲಿಲ್ಲ. "ನೀನು ಪ್ರಾಣಿಯನ್ನು ಕಾಪಾಡಿ ಒಳ್ಳೆಯದನ್ನೇ ಮಾಡಿದೆ, ಅದನ್ನು ಚೆನ್ನಾಗಿ ನೋಡಿಕೊ, ಅದರ ಗಾಯ ವಾಸಿಯಾದ ಮೇಲೆ ಅದು ತನ್ನ ಹಿಂಡಿನ ಜೊತೆ ಸೇರಲಿ" ಎಂದು ಅವನು ಹೇಳಿದ.

ತೋಡರ ಸಮಾಜ ನಿಜಕ್ಕೂ ಪ್ರಜಾಪ್ರಭುತ್ವದ ಸಮಾಜ. ಯಾವ ವಿಧಿವತ್ತಾದ ನಾಯಕನಾಗಲಿ, ಮುಖ್ಯನಾಗಲೀ ಅಲ್ಲಿ ಇಲ್ಲ. ಜಾತಿ ಪದ್ಧತಿಗಳು, ಧಾರ್ಮಿಕ ವಿಧಿಗಳ ಅನುಸರಣೆ ಕುರಿತ ವಿವಾದಗಳು

ಮತ್ತು ಆಸ್ತಿ ವಿವಾದಗಳೂ ಸೇರಿದಂತೆ ಗುಂಪುಗಳ ನಡುವಣ ವಿವಾದಗಳನ್ನು ಬಗೆಹರಿಸುವುದಕ್ಕೆ ಇರುವ ಉನ್ನತ ಸಂಸ್ಥೆಯೆಂದರೆ ಜಾತಿ ಮಂಡಳಿ. ಇದಕ್ಕೆ ನೋಯಂ ಎನ್ನುತ್ತಾರೆ. ವಯಸ್ಕನಾದ ಪ್ರತಿಯೊಬ್ಬ ತೋಡನೂ ಈ ಮಂಡಳಿಯ ಸಭೆಯಲ್ಲಿ ಭಾಗವಹಿಸಬಲ್ಲ. ಮಂಡಳಿಯ ನಂತರದ ಅಧಿಕಾರ ಸ್ಥಾನ ಉಪಜಾತಿಗಳ ಸಭೆಗಳದ್ದು. ಎಲ್ಲರ ಮೇಲೂ ಅಧಿಕಾರ ಚಲಾಯಿಸುವ ಒಬ್ಬ ನಾಯಕನೆನ್ನುವವನು ಇಲ್ಲದೆ ಹೋದರೂ ಕೆಲವರು ಸಾಕಷ್ಟು ಪ್ರಭಾವ ಬೀರುತ್ತಾರೆ. ಕೋಡನ್ ತನ್ನ ಜಾಣತನ ಮತ್ತು ಹಿತವಾದ ಸ್ವಭಾವದಿಂದಾಗಿ ಈ ಪೈಕಿ ಒಬ್ಬನಾಗಿದ್ದ. ನೀಲಗಿರಿ ಪರ್ವತಗಳಲ್ಲಿ ಬ್ರಿಟಿಷ್ ಆಳ್ವಿಕೆ ಸ್ಥಾಪನೆಯಾದಾಗ ಸಿವಿಲ್ ಆಡಳಿತ ನಡೆಸಲು ಒಬ್ಬ ಮೊನೆಗಾರನನ್ನು ನೇಮಿಸಲಾಯಿತು. ತೋಡರ ಮೇಲೆ ಅವನು ಹೊಂದಿದ್ದ ಪ್ರಭಾವದಿಂದಾಗಿ ಕೋಡನ್‌ಗೆ ಈ ಹುದ್ದೆಯನ್ನು ಕೊಡಲಾಯಿತು. ಆದರೆ ತೋಡರ ಆಂತರಿಕ ವಿಷಯಗಳಲ್ಲಿ ಯಾವುದೇ ವಿಶೇಷ ಹಕ್ಕುಗಳನ್ನು ಈ ಹುದ್ದೆ ನೀಡಲಿಲ್ಲ.

ಎಮ್ಮೆ ಕರುಗಳನ್ನು ಮೇಯಿಸುವುದು ಕಾರ್ನೋಜ್‌ನ ಕೆಲಸವಾಗಿತ್ತು. ಅದು ಇಡೀ ದಿನದ ಕೆಲಸವಾಗಿತ್ತು. ಸ್ವಲ್ಪ ಹೊತ್ತು ಅವುಗಳನ್ನು ಗಮನಿಸದೆ ಹೋದರೂ, ಕರುಗಳು ಚದುರಿ ಹೋಗಿ ತೊಂದರೆಗೀಡಾಗುತ್ತಿದ್ದವು. ಕಾಡುಮೇಕೆಯ ಮರಿಯನ್ನು ಸರಿಯಾಗಿ ನೋಡಿಕೊಳ್ಳಲು ತನಗೆ ಸಾಧ್ಯವಾಗದೆ ಹೋಗಬಹುದು ಎಂದು ಕಾರ್ನೋಜನಿಗೆ ಚಿಂತೆಯಾಗಿತ್ತು. ಆದರೆ ಸುದೈವದಿಂದ ಅವನ ತಂಗಿ ಸಿಮಿಲ್ ಅವನಿಲ್ಲದಾಗ ಮರಿಯನ್ನು ತಾನು ನೋಡಿಕೊಳ್ಳುವುದಾಗಿ ಹೇಳಿದಳು. ಅವಳಿಗೂ ಪ್ರಾಣಿಗಳೆಂದರೆ ಇಷ್ಟವೇ. ಇದರಿಂದ ಕಾರ್ನೋಜನಿಗೆ ಬಹಳ ಸಮಾಧಾನವಾಯಿತು. ತನ್ನ ಎಂದಿನ ಕೆಲಸಕ್ಕೆ ಗಮನ ಕೊಡುವುದು ಅವನಿಗೆ ಸಾಧ್ಯವಾಯಿತು.



# III

ತೋಡರು ತಮ್ಮ ಪಶುಸಂಪತ್ತನ್ನೇ ಪ್ರಧಾನವಾಗಿ ಅವಲಂಬಿಸಿದ ಜನ. ಅವರ ಸಾಮಾಜಿಕ ಮತ್ತು ಆರ್ಥಿಕ ಜೀವನ ಆವರ ಎಮ್ಮೆ ಹಿಂಡುಗಳ ಸುತ್ತ ಹೆಣೆದುಕೊಂಡಿದೆ. ತೋಡ ಗುಡ್ಡಗಾಡಿನ ಎಮ್ಮೆ ಘನಗಂಭೀರವಾದ, ದಷ್ಟಪುಷ್ಟವಾದ ಬೃಹತ್ ಪ್ರಾಣಿ. ಅದರ ಕೊಂಬುಗಳು ಉದ್ದಕ್ಕೆ ಹಾಗೂ ಮೇಲುಗಡೆಯ ತುದಿಯಿಂದ ಸುರುಳಿ ಸುತ್ತಿಕೊಂಡಿವೆ. ಈ ಎಮ್ಮೆ ಉಗ್ರ ರೂಪವನ್ನೂ ತಾಳಬಲ್ಲದು. ಈ ಎಮ್ಮೆಗಳು ಹಿಂಡಿನಲ್ಲಿದ್ದರೆ ಹುಲಿಗಳೂ ಇವುಗಳಿಂದ ದೂರವಿರುತ್ತವೆ.

ಈ ಎಮ್ಮೆಗಳಲ್ಲಿ ಎರಡು ವಿಧ – ಪವಿತ್ರ ಹೈನುಮನೆಗಳಿಗೆ ಸೇರಿದ ಎಮ್ಮೆಗಳು ಹಾಗೂ ಇತರ ಹೈನುಮನೆಗಳಿಗೆ ಸೇರಿದ ಎಮ್ಮೆಗಳು. ಪವಿತ್ರ ಹೈನು ಮನೆಗಳಿಗೆ ಸೇರಿದ ಎಮ್ಮೆಗಳನ್ನು ಧಾರ್ಮಿಕ ವಿಧಿಗಳಲ್ಲಿನ ಅವುಗಳ ಪಾತ್ರಕ್ಕೆ ತಕ್ಕಂತೆ ವರ್ಗೀಕರಿಸಲಾಗಿದೆ. ಪವಿತ್ರ ಹೈನುಮನೆಗಳಿಗೆ ಸೇರಿದ ಬಹುತೇಕ ಎಮ್ಮೆಗಳು ಖಾಸಗಿ ಮಾಲೀಕತ್ವಕ್ಕೆ ಸೇರಿರುತ್ತವೆ. ಈ ಎಮ್ಮೆಗಳಿಂದ ದೊರೆತ ಹಾಲು ಮತ್ತು ಅದರಿಂದ ತಯಾರಿಸುವ ಇತರ ಉತ್ಪನ್ನಗಳನ್ನು ಯಾವ ನಿರ್ಬಂಧವೂ ಇಲ್ಲದೆ ಯಾರಿಗಾದರೂ ಮಾರಬಹುದು.

ತೋಡರು ನೀಲಗಿರಿಯಲ್ಲಿ ಮೊಟ್ಟಮೊದಲು ವಾಸಿಸಿದವರೆಂದು ನಂಬಲಾಗಿದೆ. ಅವರು ಚಹರೆ, ನಡವಳಿಕೆ ಮತ್ತು ಆಚಾರಗಳಲ್ಲಿ ದಕ್ಷಿಣ ಭಾರತದ ಇತರ ಗುಡ್ಡಗಾಡಿನ ಜನಾಂಗಗಳು ಮತ್ತು ಜನರಿಗಿಂತ ಭಿನ್ನವಾಗಿದ್ದಾರೆ. ಗಂಡಸರು ಎತ್ತರವಾಗಿಯೂ, ದಷ್ಟಪುಷ್ಟವಾಗಿಯೂ ಇದ್ದಾರೆ. ತಮ್ಮ ಆವಾಸಸ್ಥಾನವಾದ ಪರ್ವತಗಳಂತೆ ಅವರು ಗಡಸು. ವಯಸ್ಸಾದ ಗಂಡಸರು ಗಡ್ಡವನ್ನು ಉದ್ದವಾಗಿ ಬೆಳೆಸುತ್ತಾರೆ. ಅದರಿಂದಾಗಿ ಅವರು ಹೆಚ್ಚು ವರ್ಚಸ್ವಿಯಾಗಿ ಕಾಣುತ್ತಾರೆ. ಹೆಂಗಸರು ತೆಳ್ಳಗೂ, ಕೋಮಲವಾಗಿಯೂ ಇರುತ್ತಾರೆ. ಅವರು ಕೂದಲನ್ನು ಉದ್ದುದ್ದಕ್ಕೆ ಸುರುಳಿಸುರುಳಿಯಾಗಿ ಗಂಟು ಹಾಕಿರುತ್ತಾರೆ ಹಾಗೂ ಅನೇಕ ಹಚ್ಚೆಗಳನ್ನು ಹಾಕಿಸಿಕೊಂಡಿರುತ್ತಾರೆ. ತೋಡರು ಬಹುಪತಿತ್ವವನ್ನು ಅನುಸರಿಸುತ್ತಾರೆ. ಅಂದರೆ ಒಬ್ಬ ಹೆಂಗಸು

ಒಬ್ಬರಿಗಿಂತಲೂ ಹೆಚ್ಚು ಗಂಡಂದಿರನ್ನು ಹೊಂದಿರಬಹುದು. ತೋಡರು ಅನುಸರಿಸುವ ಬಹುಪತಿತ್ವ ಭ್ರಾತ್ರೀಯವಾದದ್ದು; ಒಬ್ಬ ಹೆಂಗಸು ಒಬ್ಬ ಗಂಡಸನ್ನು ಮದುವೆಯಾದರೆ ಐವರು ಪಾಂಡವರನ್ನು ದ್ರೌಪದಿ ಮದುವೆಯಾದ ಹಾಗೆ ಆಕೆ ಅವನ ಎಲ್ಲ ಸೋದರರನ್ನೂ ಮದುವೆಯಾದಂತೆ. ತೋಡರು ಹಿಂದಿನ ಕಾಲದಲ್ಲಿ ಅನುಸರಿಸಿದ ಮತ್ತೊಂದು ಪದ್ಧತಿಯಿಂದಾಗಿ ಈ ಬಹುಪತಿತ್ವದ ಅಗತ್ಯ ಉಂಟಾಯಿತು. ದನಗಾಹಿ ಜನರಾಗಿದ್ದರಿಂದ ಅವರ ಆಸ್ತಿಪಾಸ್ತಿಗಳು ಅಲ್ಪವಾಗಿದ್ದವು ಹಾಗೂ ಹೆಚ್ಚಿನ ಜನರ ಆವಶ್ಯಕತೆಗಳನ್ನು ಪೂರೈಸುವುದು ಅವರಿಗೆ ಸಾಧ್ಯವಿರಲಿಲ್ಲ. ಆದ್ದರಿಂದ ಅವರು ಅನಪೇಕ್ಷಿತ ಹೆಣ್ಣುಮಕ್ಕಳನ್ನು ಸಾಮಾನ್ಯವಾಗಿ ಅಲಕ್ಷಿಸಿ, ಅವರು ಸಾಯುವುದಕ್ಕೆ ಬಿಡುತ್ತಿದ್ದರು. ಈ ರೂಢಿಯನ್ನು ಬಿಡುವಂತೆ ಬ್ರಿಟಿಷರು ತೋಡರನ್ನು ತಿದ್ದಿದರು. ಇದರ ಪರಿಣಾಮವಾಗಿ ಬಹುಪತಿತ್ವ ಪದ್ಧತಿಯ ಆಚರಣೆಯೂ ಕಡಿಮೆಯಾಯಿತು.

ತೋಡ ಭಾಷೆ ತಂದೆತಾಯಿಗಳಿಂದ ಮಕ್ಕಳು ಕಲಿಯುವ ಭಾಷೆಯಾಗಿದೆ. ಅದು ಲಿಪಿಯನ್ನು ಹೊಂದಿಲ್ಲ. ಗಂಡಸರು ಮತ್ತು ಹೆಂಗಸರು ಪುತುಕುಳಿ ಎಂಬ ಒರಟು ಬಿಳಿಯ ವಸ್ತ್ರವನ್ನು ಧರಿಸಿರುತ್ತಾರೆ. ಬಹಳ ಕೌಶಲದ ಕಸೂತಿಯಿಂದ ಅಲಂಕೃತವಾದ ಈ ವಸ್ತ್ರದ ಅಂಚುಗಳನ್ನು ಕೆಂಪು ಮತ್ತು ನೀಲಿ ಅಥವಾ ಕಪ್ಪು ದಾರದಿಂದ ಹೊಲಿಯಲಾಗಿರುತ್ತದೆ. ಹಾಗೂ ಈ ವಸ್ತ್ರವನ್ನು ರೋಮನ್ನರ ಟೋಗಾದಂತೆ ಧರಿಸಲಾಗುತ್ತದೆ. ಒಳ್ಳೆಯ ಮೈಬಣ್ಣ, ಆಕಾರ ಹೊಂದಿದ ಮತ್ತು ಕುಳಿಯನ್ನು ಉತ್ತರೀಯದಂತೆ ಹೆಗಲ ಮೇಲೆ ಧರಿಸಿದ ತೋಡ ಗಂಡಸನ್ನು ರೋಮ್‌ನ ಶ್ರೀಮಂತ ನಾಗರಿಕನಿಗೆ ಹೋಲಿಸಬಹುದು.

ತೋಡರ ಊಟದ ಮುಖ್ಯ ವಸ್ತುವೆಂದರೆ ಒಂದಿಷ್ಟು ಬೆಣ್ಣೆ ಅಥವಾ ತುಪ್ಪದೊಂದಿಗೆ ಬಡಿಸುವ ಮಜ್ಜಿಗೆಯಲ್ಲಿ ಬೇಯಿಸಿದ ಅನ್ನ.

ತೋಡರ ಮೂಲವನ್ನು ವಿವರಿಸುವ ಅನೇಕ ಅದ್ಭುತ ಹಾಗೂ ಕೆಲವು ವಿನೋದದ ವಿಚಾರಗಳಿವೆ. ತೋಡರು ಕಾಣೆಯಾದ ಹೀಬ್ರೂ ಜನಾಂಗದವರು ಎಂದು ಕೆಲವು ವಿದ್ವಾಂಸರು ನಂಬುತ್ತಾರೆ. ತೋಡರು ರೋಮನ್ ಕಾಲೋನಿಯೊಂದರಲ್ಲಿ ಅಳಿದುಳಿದವರು ಎಂದು ಕೆಲವರು ರುಜುವಾತು ಮಾಡಲು ಪ್ರಯತ್ನಿಸಿದ್ದಾರೆ. ತೋಡರು ಪ್ರಾಚೀನ ಸಿಥಿಯನ್ ಯೋಧರ ವಂಶಸ್ಥರು ಎಂದು ಕೆಲವರು ಭಾವಿಸಿದ್ದಾರೆ. ಅವರ ಮೂಲವನ್ನು ಕುರಿತ ನಿಗೂಢತೆಯೇ ಅವರ ಬಗ್ಗೆ ಆಸಕ್ತಿಯನ್ನು ಹೆಚ್ಚಿಸಿದೆ. ಅವರು ಬಹುಶಃ ದ್ರಾವಿಡ ಜನಾಂಗಕ್ಕೆ ಸೇರಿದವರು.

ತಾವೊಂದು ವಿಶೇಷ ಜನಾಂಗ ಎಂದು ತೋಡರು ನಂಬಿದ್ದಾರೆ. ಅವರ ಪ್ರಕಾರ, ಅವರ ದೇವತೆ ಓನ್ ತನ್ನ ಪತ್ನಿಯೊಡನದ ಕುಂಥ ಪರ್ವತ ಶ್ರೇಣಿಯ ತುದಿಗೇರಿ ಅವುಗಳಿಗೆ ಅಡ್ಡಲಾಗಿ ಒಂದು ಕಬ್ಬಿಣದ ಸಲಾಕೆಯನ್ನಿಟ್ಟ. ಸಲಾಕೆಯ ಒಂದು ತುದಿಯಲ್ಲಿ ಅವನು ನಿಂತ ಹಾಗೂ ಇನ್ನೊಂದು ತುದಿಯಲ್ಲಿ ಅವನ

ಹೆಂಡತಿ ನಿಂತಳು. ಭೂಮಿಯ ಗರ್ಭದಿಂದ ಅವನು 1,600 ಎಮ್ಮೆಗಳನ್ನೂ, ಅವನ ಹೆಂಡತಿ 1,800 ಎಮ್ಮೆಗಳನ್ನೂ ತಂದರು. ಓನ್‌ನ ಎಮ್ಮೆಗಳು ಮೊದಲ ಪವಿತ್ರ ಎಮ್ಮೆಗಳಾಗಿದ್ದವು ಹಾಗೂ ಅವನ ಹೆಂಡತಿ ತಂದ ಎಮ್ಮೆಗಳು ಸಾಮಾನ್ಯ ಎಮ್ಮೆಗಳಾಗಿದ್ದವು. ಪವಿತ್ರ ಎಮ್ಮೆಗಳಲ್ಲಿ ಕೊನೆಯದರ ಬಾಲವನ್ನು ಹಿಡಿದವನು ಮೊದಲ ತೋಡ. ಓನ್ ದೇವರು ತನ್ನ ದೇಹದಿಂದ ಒಂದು ಪಕ್ಕೆಲುಬನ್ನು ತೆಗೆದು ಅದರಿಂದ ಒಬ್ಬ ತೋಡ ಹೆಂಗಸನ್ನು ಸೃಷ್ಟಿಸಿದ. ಇದಾದ ಸ್ವಲ್ಪ ಕಾಲದ ನಂತರ ಓನ್, ನೀಲಗಿರಿ ಪ್ರಸ್ಥಭೂಮಿಯಿಂದ ಆಕಸ್ಮಿಕವಾಗಿ ನೀರಿನಲ್ಲಿ ಮುಳುಗಿ ಸತ್ತ ತನ್ನ ಮಗನನ್ನು ಸೇರಲು ಸತ್ತವರ ಜಗತ್ತಾದ ಅಮ್ನೋರ್ದೆಗೆ ತೆರಳಿದ. ಅವನ ತಂಗಿ ಥೆಕರ್ಶಿ ತೆರವಾದ ಅವನ ಸ್ಥಾನವನ್ನು ವಹಿಸಿಕೊಂಡಳು. ತೋಡರು ಪೂಜಿಸುವ ದೇವತೆಯೇ ಥೆಕರ್ಶಿ. ತೋಡರು ಜಾತಿ, ಉಪಜಾತಿ ಮತ್ತು ಪಂಗಡಗಳಾಗಿ ವಿಂಡಣೆಯಾಗಿರುವುದಕ್ಕೆ ಈ ದೇವತೆಯೇ ಕಾರಣ ಎಂದು ಹೇಳಲಾಗುತ್ತದೆ.

ತೋಡರನ್ನು 'ಜಮೀನಿನ ಯಜಮಾನರು' ಎಂದು ಪರಿಗಣಿಸಲಾಗುತ್ತಿತ್ತು. ಬ್ರಿಟಿಷ್ ಸರ್ಕಾರ ಕಾಲಕ್ರಮೇಣ ಹತೋಟಿಯನ್ನು ಹೊಂದಿ ಭಾರತದ ಇತರೆಡೆ ಇದ್ದ ಗೇಣಿ ಪದ್ಧತಿಗೆ ತೋಡರ ಜಮೀನುಗಳನ್ನೂ ಒಳಪಡಿಸಿತು. ಅಲ್ಲದೆ ತೋಡರ 'ಪಟ್ಟ' ಭೂಮಿಗಳೆಂದು ಕರೆಯಲಾದ ಕೆಲವು ಜಮೀನುಗಳನ್ನು ಅವರಿಗೆ ಮೀಸಲಿಡಲಾಯಿತು.

ನೀಲಗಿರಿ ಕಾಡುಮೇಕೆಯ ವೈಜ್ಞಾನಿಕ ಹೆಸರು ಹರ್ಮಿಟ್ರಾಗಸ್ ಹೈಲೋಕ್ರಿಯಸ್. ಐರೋಪ್ಯ ಬೇಟೆಗಾರರು ಅದನ್ನು ದಕ್ಷಿಣದಲ್ಲಿ 'ಐಬೆಕ್ಸ್' ಎಂದು ಕರೆದರು. ತಮಿಳು ಮತ್ತು ಮಲೆಯಾಳದಲ್ಲಿ 'ಕ್ಲಿಫ್ ಗೋಟ್' ಎಂದು ಕರೆಯುತ್ತಾರೆ. ಅದು ಯುಕ್ತ ಮತ್ತು ಉಚಿತ. ಈ ಕಾಡುಮೇಕೆಯೂ ನಿಗೂಢ ಪ್ರಾಣಿಯಾಗಿದೆ. ಇದು ಹಿಮಾಲಯದಿಂದ ದಕ್ಷಿಣಕ್ಕಿರುವ ಮೇಕೆಗಳ ಕುಟುಂಬಕ್ಕೆ ಸೇರಿದ ಏಕಮಾತ್ರ ಸದಸ್ಯ ಮತ್ತು ಜಗತ್ತಿನಲ್ಲಿರುವ ಮೂರು ರೀತಿಯ ಕಾಡುಮೇಕೆಗಳಲ್ಲಿ ಒಂದು. ಪಶ್ಚಿಮ ಘಟ್ಟಗಳ ದಕ್ಷಿಣ ಭಾಗದ ಎತ್ತರದ ಪರ್ವತಶ್ರೇಣಿಗಳಲ್ಲಿ, ನೀಲಗಿರಿಯಿಂದ ದಕ್ಷಿಣದ ಕಡೆಗೆ ಇದು ಕಂಡುಬರುತ್ತದೆ. ಸಮಶೀತೋಷ್ಣ ವಲಯಕ್ಕೆ ಸೇರಿದ ಹಾಗೂ ಹಿಮಾಲಯದ ಕಾಡುಮೇಕೆಗಳ ಕುಟುಂಬಕ್ಕೆ ಸಮೀಪವಾದ ಈ ಪ್ರಾಣಿ ಉಷ್ಣವಲಯಕ್ಕೆ ಹೇಗೆ ಬಂದಿತು ಎಂಬುದನ್ನು ವಿವರಿಸುವುದು ಕಠಿಣ. ಅನೇಕ ವಿಚಾರಸರಣಿಗಳನ್ನು ಮುಂದಿಡಲಾಗಿದೆ. ನೀರ್ಗಲ್ಲಿನ ಯುಗದಲ್ಲಿ ಸಾತ್ಪುರ ಪರ್ವತಶ್ರೇಣಿ ವಾತಾವರಣದ ದೃಷ್ಟಿಯಿಂದ ಹಿಮಾಲಯದೊಂದಿಗೆ ಸಮಶೀತೋಷ್ಣ ಸಂಬಂಧವನ್ನು ಹೊಂದಿದ್ದು, ಆ ಕಾಲದಲ್ಲಿ ಹಿಮಾಲಯದ ಹಾಗೂ ಭಾರತ–ಮಲಯಾದ ಅನೇಕ ಪಶುಪಕ್ಷಿಗಳೂ – ಇವುಗಳಲ್ಲಿ ನೀಲಗಿರಿ ಕಾಡುಮೇಕೆಯೂ ಸೇರಿತ್ತು – ಮತ್ತು ಸಸ್ಯಗಳೂ ದಕ್ಷಿಣದತ್ತ ಚಲಿಸಿದವು ಎಂದು ವಾದಿಸುವ ವಿಚಾರಸರಣಿ ನಿಗೂಢತೆಯನ್ನು ವಿವರಿಸುವುದರಲ್ಲಿ ಬಹುತೇಕ ಯಶಸ್ವಿಯಾಗುತ್ತದೆ.

ನಂತರ ಉಷ್ಣತೆಯ ಕಾಲದಲ್ಲಿ ಈ ಪ್ರಾಣಿಗಳೂ, ಸಸ್ಯಗಳೂ ಹಿಂದೆ ಸರಿದು ಪಶ್ಚಿಮ ಘಟ್ಟಗಳ ತಂಪು ಶಿಖರಗಳಲ್ಲಿ ಆಶ್ರಯ ಪಡೆದವು. ನಿಗೂಢತೆಯ ಸೃಷ್ಟಿಯಾದ ತೋಡರು ಮತ್ತು ಕಾಡುಮೇಕೆಗಳು ನೀಲಗಿರಿಯನ್ನು ಆವಾಸಸ್ಥಾನವನ್ನಾಗಿ ಹಂಚಿಕೊಂಡ ಜೀವಿಗಳಾದವು.





# IV

ಕಾರ್ನೋಜನ ತಂದೆಯ ಮಾರ್ಗದರ್ಶನದಲ್ಲಿ ನಡೆದ ಚಿಕಿತ್ಸೆಯಿಂದಾಗಿ ಕಾಡುಮೇಕೆಯ ಮರಿಯ ಗಾಯ ಬೇಗ ವಾಸಿಯಾಯಿತು. ಆದರೆ ಅದರ ಕತ್ತಿನ ಸುತ್ತಲೂ ಗಾಯದ ಗುರುತು ಖಾಯಂ ಆಗಿ ಉಳಿಯಿತು. ಈ ಅವಧಿಯಲ್ಲಿ ಕಾರ್ನೋಜ್ ಎಮ್ಮೆ ಕರುಗಳ ಜೊತೆ ಕೊಟ್ಟಿಗೆಯಲ್ಲಿ ಮೇಕೆಯ ಮರಿಯನ್ನು ಇಟ್ಟಿದ್ದ. ಬಹಳ ಬೇಗ ಮರಿ ತನ್ನ ಸಹಜೀವಿಗಳೊಂದಿಗೆ ಸ್ನೇಹ ಮಾಡಿಕೊಂಡಿತು. ಮಂಡ್‌ನ ಶಬ್ದಗಳು, ವಾಸನೆಗಳು ಹಾಗೂ ಜನರ ಓಡಾಟದಿಂದ ಅದಕ್ಕೆ ಆಗುತ್ತಿದ್ದ ಭಯ ಇಲ್ಲವಾಯಿತು. ಅದು ಬಹಳ ಸಾಧುಪ್ರಾಣಿಯಾಯಿತು, ಕಾರ್ನೋಜ್ ಮತ್ತು ಸಿಮಿಲ್ ಅವರ ಜೊತೆ ಆಟವಾಡುತ್ತಿತ್ತು. ತಾನು ಕೊಟ್ಟಿಗೆಯ ಹತ್ತಿರ ಇದ್ದಾಗ ಕಾರ್ನೋಜ್ ಅದನ್ನು ಹೊರಗೆ ಬಿಡುತ್ತಿದ್ದ. ಆಗ ಅದು ಓಡಿ ಹೋಗುವ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಬದಲಿಗೆ, ಕಾರ್ನೋಜ್ ಹೋದೆಡೆಯಲ್ಲೆಲ್ಲಾ ಅವನನ್ನು ಹಿಂಬಾಲಿಸತೊಡಗಿತು.

ತೋಡ ಎಮ್ಮೆಗಳಿಗೆ ಅಪರಿಚಿತ ಮನುಷ್ಯರು ಮತ್ತು ಪ್ರಾಣಿಗಳ ಬಗ್ಗೆ ಬಹಳ ಸಂಶಯ. ಅವು ಎಳೆಯ ಕರುಗಳನ್ನು ಹೊಂದಿದ್ದರಂತೂ ಮೇಲೆ ಬೀಳುವ ಪ್ರವೃತ್ತಿ ಹೊಂದಿರುತ್ತವೆ. ಒಂದು ದಿನ ಬೆಳಿಗ್ಗೆ ಹೊಸದಾಗಿ ಕರು ಹಾಕಿದ್ದ ಎಮ್ಮೆಯೊಂದು ಮೇಕೆಯ ಮರಿ ತನ್ನ ಕರುವಿನೊಂದಿಗೆ ಆಡತ್ತಿದ್ದುದನ್ನು ನೋಡಿ, ಮರಿಯ ಮೇಲೆ ನುಗ್ಗಿತು. ಗುಡಿಸಲುಗಳ ನಡುವಣ ಖಾಲಿ ಸ್ಥಳದಲ್ಲಿ ಕುಳಿತಿದ್ದ ಕೂಚ್ ಈ ದೃಶ್ಯವನ್ನು ನೋಡುತ್ತಿತ್ತು. ಮರಿ ಅಪಾಯದಲ್ಲಿರುವುದನ್ನರಿತ ನಾಯಿ ಕ್ಷಣಾರ್ಧದಲ್ಲಿ ಮೇಲೆ ನೆಗೆದು ಎಚ್ಚರಿಕೆಯ ಸೂಚನೆಯಾಗಿ ಜೋರಾಗಿ ಬೊಗಳುತ್ತಾ ಮೇಕೆಮರಿ ಮತ್ತು ಉದ್ರಿಕ್ತ ಎಮ್ಮೆಯ ನಡುವೆ ಅಡ್ಡ ನಿಂತಿತು. ಇದರಿಂದ ಮೇಕೆಮರಿಗೆ ತಪ್ಪಿಸಿಕೊಳ್ಳಲು ಅವಕಾಶವಾಯಿತು. ಇಂತಹ ಸಣ್ಣಪುಟ್ಟ ಘಟನೆಗಳಿಂದ ಕೂಚ್ ಶತ್ರುವಲ್ಲ, ಅದನ್ನು ನಂಬಬಹುದು ಎಂದು ಮೇಕೆಮರಿಗೆ ಅರಿವಾಯಿತು. ಇವೆರಡೂ ಪ್ರಾಣಿಗಳ ನಡುವೆ ಬಹಳ ಸ್ನೇಹ ಉಂಟಾಯಿತು.

ಕಾಡುಮೇಕೆ ಮರಿಗೆ ಒಂದು ಹೆಸರನ್ನಿಡಬೇಕಲ್ಲ ಎಂದು ಕಾರ್ನೋಜ್ ಯೋಚಿಸಿದ. ಒಮ್ಮೆ ಮುಕರ್ತಿ ಬೆಟ್ಟದ ಮೇಲೆ ಮುಳುಗುತ್ತಿದ್ದ ಸೂರ್ಯನ ಕಿರಣಗಳನ್ನು ಇಬ್ಬರೂ ನೋಡುತ್ತಿದ್ದಾಗ ಅವನು ಈ ಬಗ್ಗೆ ಸಿಮಿಲ್‌ನ ಸಲಹೆ ಕೇಳಿದ. ಈ ಬೆಟ್ಟ ಒಂದು ದೃಷ್ಟಿಯಲ್ಲಿ ಅವರಿದ್ದ ಮಂಡ್‌ನ ಪರ್ವತ ಶಿಖರವೇ ಆಗಿತ್ತು. ಕಲ್ಲು ಬಂಡೆಗಳ, ತೇವವಾದ ಪರ್ವತ ಶಿಖರದ ಮೇಲೆ ಬಿದ್ದ ಸುವರ್ಣ ಕಿರಣಗಳಿಂದಾಗಿ ಶಿಖರ ಹೊಳೆಯುತ್ತಿತ್ತು. ಈ ಬಂಡೆಗಳಿಂದ ಮೇಲೆದ್ದ ಮಂಜು ಮತ್ತು ಆವಿಯಿಂದಾಗಿ ಬೆಟ್ಟ ಸಜೀವ ಅಗ್ನಿಪರ್ವತದಂತೆ ಕಾಣುತ್ತಿತ್ತು. ಇದು ತುಸುವೇ ಸಮಯ ಹೀಗೆ ಕಂಡರೂ, ಅದರ ಪರಿಣಾಮ ತೀಕ್ಷ್ಣವಾಗಿತ್ತು. ಕಾರ್ನೋಜ್ ಮತ್ತು ಸಿಮಿಲ್ ಈ ದೃಶ್ಯವನ್ನು ಮಂತ್ರಮುಗ್ಧರಾದವರಂತೆ ಮೌನದಿಂದ ನೋಡಿದರು.

"ಬೆಟ್ಟ ಎಂದೇಕೆ ಹೆಸರಿಡಬಾರದು?" ಎಂದು ಮೌನವನ್ನು ಮುರಿದು ಸಿಮಿಲ್ ಸಲಹೆ ಮಾಡಿದಳು. ಕಾರ್ನೋಜ್‌ಗೆ ಇದು ಅಷ್ಟಾಗಿ ಹಿಡಿಸಲಿಲ್ಲ. ಅ ಹೊತ್ತಿಗೆ ಸರಿಯಾಗಿ ದಟ್ಟವಾದ ಮೋಡವೊಂದು ಪರದೆಯಂತೆ ಪರ್ವತಕ್ಕೆ ಅಡ್ಡವಾಗಿ ಆ ದೃಶ್ಯ ಮರೆಯಾಯಿತು. "ಮೋಜ್ ಹೇಗಿರುತ್ತದೆ" ಎಂದು ಸಿಮಿಲ್ ಸ್ವಲ್ಪ ಸಿಡುಕಿನಿಂದ ಕೇಳಿದಳು. (ತೋಡರ ಭಾಷೆಯಲ್ಲಿ ಮೋಜ್ ಎಂದರೆ ಮಂಜು). ಕಾರ್ನೋಜ್‌ನ ಮುಖ ಅರಳಿತು. "ಇದು ಒಳ್ಳೆಯ ಹೆಸರು" ಎಂದು ಅವನು ಒಪ್ಪಿದ. ಕಾಡುಮೇಕೆಗಳೂ ನಿಜಕ್ಕೂ ಮೋಡದ ಮೇಕೆಗಳು, ಏಕೆಂದರೆ ಅವು ತಮ್ಮ ಜೀವನದ ಬಹುಭಾಗವನ್ನು ಮೋಡಗಳ ನಡುವೆ ಕಳೆಯುತ್ತವೆ. ಕಾಡುಮೇಕೆಯ ಮರಿಗೆ ಮೋಜ್ ಎಂದೇ ಹೆಸರಿಡಲಾಯಿತು.

ತೋಡ ಮಹಿಳೆಯರು ಹೊಲಿಗೆ ಕೆಲಸವನ್ನು ಚೆನ್ನಾಗಿ ಮಾಡುತ್ತಾರೆ, ಅದರಲ್ಲೂ ಕಸೂತಿ ಕೆಲಸದಲ್ಲಿ ಅವರು ನಿಪುಣರು. ಸಿಮಿಲ್ ಈ ಕಲೆಯಲ್ಲಿ ಇತರ ಅನೇಕರಿಗಿಂತ ಒಂದು ಕೈ ಮುಂದೆ. ಪುತು ಕುಳಿಗಳನ್ನು ಅಲಂಕರಿಸಲು ಅವಳನ್ನು ಕೇಳುವವರು ಬಹಳ ಮಂದಿ. ಮೋಜ್‌ನ ಕತ್ತಿಗೆ ಕಟ್ಟಲು ಸಿಮಿಲ್ ಒಂದು ಕಸೂತಿ ಹಾಕಿದ ಸುಂದರವಾದ ಪಟ್ಟಿಯನ್ನು ಸಿದ್ಧಪಡಿಸಿದಳು. ಮೇಕೆಮರಿಗೆ ಇದು ಇಷ್ಟವಾದಂತೆ ತೋರಿತು.

ಇಷ್ಟು ಹೊತ್ತಿಗೆ ಕೆಲವು ತಿಂಗಳುಗಳೇ ಕಳೆದಿದ್ದವು. ಮೋಜ್ ಬಹಳ ಬೇಗ ಬೆಳೆಯುತ್ತಿತ್ತು. ಅದು ಈಗ ಕೇವಲ ಹಾಲನ್ನು ಅವಲಂಬಿಸಿರಲಿಲ್ಲ. ಆದ್ದರಿಂದ ಸಿಮಿಲ್ ಪ್ರೀತಿಯಿಂದ ಹುಲ್ಲು, ಕಾಡಿನ ಸಸ್ಯಗಳು ಮತ್ತು ಬಳ್ಳಿಗಳ ಎಳೆಯ ಎಲೆಗಳನ್ನು ಕಿತ್ತು ಮೋಜ್‌ಗೆ ತಿನ್ನಿಸುತ್ತಿದ್ದಳು. ಏನು ತಿಂದರೆ ತನಗೆ ಒಳ್ಳೆಯದು ಎಂಬುದನ್ನು ಮರಿ ಅರಿತಂತಿತ್ತು.

ಮಧ್ಯಾಹ್ನ ಸಿಮಿಲ್ ಎಮ್ಮೆಕರುಗಳ ಕೊಟ್ಟಿಗೆಯಲ್ಲಿ ಕರುಗಳಿಗೆ ಮತ್ತು ಮೋಜ್‌ಗಾಗಿ ಒಂದು ಕಂತೆ ಮೇವನ್ನು ಇಡುತ್ತಿದ್ದಳು. ಒಂದು ಸಂಜೆ ತುಂಬಾ ಕೆಲಸದಲ್ಲಿದ್ದ ಸಿಮಿಲ್ ಹುಡುಗನೊಬ್ಬನಿಗೆ ಮೇವನ್ನು ತರಲು ಹೇಳಿದಳು. ಅವನು ಒಂದು ಕಂತೆಯನ್ನು ತಂದು ಹೊರಗಡೆ ಇಟ್ಟು ಹೋದ. ಸ್ವಲ್ಪ ಸಮಯದ ನಂತರ ಸಿಮಿಲ್ ಕಂತೆ ಇಟ್ಟಿದ್ದ ಕಡೆ ಹೋದಳು. ಸಾಮಾನ್ಯವಾಗಿ ಅತಿ ಆಸೆಯಿಂದ ಮೇವನ್ನು ಮುಕ್ಕುತ್ತಿದ್ದ

ಮೋಜ್ ಏನೂ ತಿನ್ನದೆ ಮೇವನ್ನೇ ನೋಡುತ್ತಾ ನಿಂತಿತ್ತು. ಮೇವನ್ನು ಸರಿಯಾಗಿ ಕೆದಕಿ ನೋಡಿದಾಗ, ಅದರಲ್ಲಿ ಕೆಲವು ವಿಷಯುಕ್ತ ಕಳೆಗಳನ್ನು ಸಿಮಿಲ್ ಕಂಡಳು. ಬಹುಶಃ ಜನ್ಮಸಿದ್ಧ ಅರಿವಿನಿಂದಾಗಿ ಅಪಾಯದ ಸುಳಿವನ್ನರಿತ ಮೋಜ್ ಮೇವನ್ನು ಮುಟ್ಟಿರಲಿಲ್ಲ. ಆದರಿಂದಾಗಿ ಎಮ್ಮೆಕರುಗಳ ಪ್ರಾಣವನ್ನು ಮರಿ ಉಳಿಸಿತು. ತಾನು ನೋಡಿದ್ದನ್ನು ಸಿಮಿಲ್ ಕಾರ್ನೋಜನಿಗೆ ಹೇಳಿದಳು. ಅವರಿಬ್ಬರೂ ಈ ಘಟನೆಯನ್ನು ಕೋಡನ್‌ಗೆ ತಿಳಿಸಿದರು. ಈ ಅಜ್ಜ ವಿಷಯವನ್ನು ಇತರರಿಗೆ ತಿಳಿಸಿದ. ಮೋಜ್ ಮೋಫ್‌ಮಂಡ್‌ನಲ್ಲಿ ಎಲ್ಲರ ಪ್ರೀತಿಗೂ ಪಾತ್ರವಾದದ್ದಷ್ಟೇ ಅಲ್ಲ, ನೆರೆಯ ಮಂಡ್‌ಗಳಲ್ಲೂ ಅದರ ಹೆಸರು ಹರಡಿತು.

ತೋಡ ಗುಡಿಸಲುಗಳ ಸುತ್ತಲೂ ಕಲ್ಲುಗಳನ್ನು ಸಡಿಲವಾಗಿ ಜೋಡಿಸಿದ ಕಾಂಪೌಂಡ್ ಗೋಡೆಗಳಿರುತ್ತವೆ. ಎಮ್ಮೆಗಳು ಗುಡಿಸಲುಗಳಿಗೆ ಮೈಯೊಡ್ಡಿ, ತಿಕ್ಕಿ ಗುಡಿಸಲುಗಳಿಗೆ ಹಾನಿಯಾಗುವುದನ್ನು ಈ ಗೋಡೆಗಳು ತಪ್ಪಿಸುತ್ತವೆ. ಗಿಡ್ಡ ಬಾಗಿಲಿನಿಂದಾಗಿ ಅವು ಗುಡಿಸಲುಗಳ ಒಳಗೆ ನುಗ್ಗುವುದೂ ಸಾಧ್ಯವಿಲ್ಲ. ಕಾಂಪೌಂಡ್ ಗೋಡೆಗಳ ಮೇಲೆ ಸುತ್ತಲೂ ತಾನು ಓಡುವುದು ಅದನ್ನು ಕೆಳಗಿನಿಂದ ಕೂಚ್ ಅಟ್ಟಿಸಿಕೊಂಡು ಹೋಗುವುದು ಮೋಜ್‌ಗೆ ತುಂಬಾ ಪ್ರಿಯವಾದ ಆಟವಾಗಿತ್ತು. ಹೀಗೆ ಓಡುವಾಗ ತನ್ನ ದೇಹದ ಸಮತೋಲವನ್ನು ಮರಿ ಮೋಜ್ ಅತ್ಯಂತ ಆಶ್ಚರ್ಯಕರವಾದ ರೀತಿಯಲ್ಲಿ ಕಾಪಾಡಿಕೊಂಡು ಬರುತ್ತಿತ್ತು. ಈ ನೈಪುಣ್ಯವನ್ನು ತೋಡರು ಬಹಳ ಮೆಚ್ಚಿಕೊಳ್ಳುತ್ತಿದ್ದರು.

ಮೋಜ್ ತಮಗೆ ಅದೃಷ್ಟವನ್ನು ತಂದಿದೆ ಎಂದು ಭಾವಿಸಿದ್ದ ಕಾರಣದಿಂದಲೂ ಮೋಫ್‌ಮಂಡ್‌ನ ತೋಡರಿಗೆ ಮೋಜ್ ಇಷ್ಟವಾಗಿತ್ತು. ತನ್ನ ಮೊದಲ ಎರಡು ಮಕ್ಕಳನ್ನು ಅವು ಹುಟ್ಟಿದ ಕೂಡಲೇ ಕಳೆದುಕೊಂಡಿದ್ದ ಸಿಮಿಲ್‌ಳ ಅಕ್ಕ ಮೋಜ್ ಬಂದ ನಂತರ ಆರೋಗ್ಯವಂತ ಮಗುವಿಗೆ ಜನ್ಮವಿತ್ತಳು.



# V

ಮುಕರ್ತಿ ಬೆಟ್ಟ ಮೋಫ್‌ಮಂಡ್‌ನಿಂದ ಮೇಲಕ್ಕೆ ಎತ್ತರವಾಗಿ, ಮಂಡ್‌ನ ಮೇಲೆ ಕಣ್ಣಿಟ್ಟಿರುವ ದೈತ್ಯ ಕಾವಲುಗಾರನಂತಿದೆ ಅದರ ಶಿಖರ ಶಂಖುವಿನಾಕಾರದ ವಸ್ತುವನ್ನು ಅರ್ಧಕ್ಕೆ ಕತ್ತರಿಸಿದಂತಿದ್ದು ಬೋಳಾಗಿದೆ. ಕಾಡುಮೇಕೆಯಂತಹ ಪ್ರಾಣಿಗಳ ಹೊರತಾಗಿ ಬೇರೆ ಯಾವುದೂ ಅದರ ಮೂರು ಪಾರ್ಶ್ವಗಳಿಂದ ಶಿಖರವನ್ನು ಹತ್ತಲಾಗದು. ಶಿಖರಕ್ಕೆ ಹೊಗುವ ಹಾದಿ ಕಲ್ಲುಗುಂಡುಗಳಿಂದ ತುಂಬಿದೆ. ಇವುಗಳ ನಡುವೆ ಹುಲ್ಲು ಮತ್ತು ಕುರುಚಲು ಗಿಡಗಳು ಬೆಳೆಯುತ್ತವೆ. ಈ ಶಿಲೆಗಳ ಕೆಳಗಡೆ ಪರ್ವತ ಹುಲ್ಲಿನ ರಾಶಿಯಂತಿದ್ದು ಅದರ ಎರಡು ತೋಳುಗಳು ನೀಳವಾಗಿ ಬಾಗಿದಂತಿದೆ. ಈ ಎರಡೂ ತೋಳುಗಳ ನಡುವಣ ಹಳ್ಳದಲ್ಲಿ ಮರಗಿಡಗಳಿಂದ ದಟ್ಟವಾಗಿರುವ ಶೋಲ ಇದೆ. ಶೋಲವನ್ನು ಬಳಸಿರುವ ಪರ್ವತದ ಒಂದು ತೋಳಿನ ಮೇಲೆ ಮಂಡ್ ಇದೆ. ಮಂಡ್‌ನಿಂದ ಶಿಖರವನ್ನು ನೋಡಲು ಶೋಲದಿಂದ ಮೇಲೆ ನೋಡಿದರೆ ಸಾಕು. ಶಂಖುವಿನ ಮುರಿದ ಪಾರ್ಶ್ವ ತಳದವರೆಗೂ ಅತ್ಯಂತ ಕಡಿದಾದ ಪ್ರಪಾತ. ಪೂರ್ವದಿಂದ ಅಥವಾ ಮಂಡ್ ಕಡೆಯಿಂದಷ್ಟೇ ಶಿಖರವನ್ನು ಹತ್ತಬಹುದು. ತಮ್ಮ ಮತ್ತು ತಮ್ಮ ಎಮ್ಮೆಗಳ ಆತ್ಮಗಳು ಶಿಖರದ ತುದಿಯಿಂದ ಒಟ್ಟಿಗೆ ಪಾತಾಳಕ್ಕೆ ಧುಮುಕುತ್ತವೆ ಎಂದು ತೋಡರು ನಂಬಿದ್ದರು.

ಪ್ರಸ್ಥಭೂಮಿಯ ಪಶ್ಚಿಮದ ತುದಿಯ ಕೋಡುಗಳಿಂದ ಕಾಡುಮೇಕೆಯ ಮಂದೆಗಳು ಆಗಾಗ ಮುಕರ್ತಿ ಬೆಟ್ಟದಲ್ಲಿ ಆಶ್ರಯ ಪಡೆಯುತ್ತವೆ. ಕಾಡುಮೇಕೆಯೊಂದಕ್ಕೆ ಆಗತ್ಯವಾದದ್ದೆಲ್ಲವನ್ನು ಪರ್ವತ ಒದಗಿಸುತ್ತದೆ – ಮೇಯಲು ಹುಲ್ಲು ಮತ್ತು ಸಸಿಗಳು ಹಾಗೂ ಅಪಾಯದ ಸಮಯದಲ್ಲಿ ಹಿಂದಕ್ಕೆ ಸರಿಯಲು ಕೋಡುಗಳು. ಇದೇ ಮೋಜ್‌ನ ಭವಿಷ್ಯದ ಮನೆ ಎಂದು ಕಾರ್ನೋಜನಿಗೆ ಹೊಳೆಯಿತು. ಹಾಗೂ ಮರಿ ಬೆಳೆದಂತೆ ತಾನು ಅದರ ಮೇಲೆ ಒಂದು ಕಣ್ಣಿಟ್ಟಿರಲೂ ಇಲ್ಲಿ ಸಾಧ್ಯ.

ತನ್ನ ಸಹಜ ಮನೆಗೆ ಹೊಂದಿಕೊಳ್ಳಲು ಮೋಜ್‌ಗೆ ಸಮಯ ಬೇಕಾಗುತ್ತದೆಂದು ಕಾರ್ನೋಜ್ ಮನಗಂಡ. ಮರಿಯನ್ನು ಎತ್ತಿಕೊಂಡು ಹೋಗಿ ಪರ್ವತದ ಶಿಖರದ ಮೇಲೆ ಬಿಟ್ಟು ಅಲ್ಲಿಂದ ಅವನು ಹಿಂತಿರುಗಬಹುದಾಗಿತ್ತು. ಆದರೆ ಮೋಜ್ ಅವನನ್ನು ಹಿಂಬಾಲಿಸುತ್ತಿತ್ತು. ಒಂದು ವೇಳೆ ಅದು ಅಲ್ಲೇ

ಉಳಿದಿದ್ದರೆ, ಅದು ಹುಲಿಯ ಬಾಯಿಗೋ, ಚಿರತೆಯ ಬಾಯಿಗೋ ಆಹಾರವಾಗುತ್ತಿತ್ತು. ನರಿಯೂ ಸಹ ಮೇಕೆಮರಿಯನ್ನು ಕೊಲ್ಲಬಹುದು.

ಮುಕರ್ತಿ ಶಿಖರಕ್ಕೆ ಮೋಜ್ ಕಾಲಕ್ರಮೇಣ ಹೊಂದಿಕೊಳ್ಳುವಂತೆ ಹೇಗೆ ಮಾಡುವುದು ಎಂದು ಕಾರ್ನೋಜ್‌ನಿಗೆ ಚಿಂತೆಯಾಯಿತು. ಆಗ ಅವನಿಗೆ ಒಂದು ವಿಚಾರ ಹೊಳೆಯಿತು. ಪ್ರಾಣಿಗಳಿಗೆ ಉಪ್ಪು ಬಹಳ ಇಷ್ಟ ಎಂಬುದು ಅವನಿಗೆ ತಿಳಿದಿತ್ತು. ವಿಶೇಷ ಸಂದರ್ಭಗಳಲ್ಲಿ ಹಾಗೂ ವಿಶೇಷ ತಿನಿಸಾಗಿ ಎಮ್ಮೆಗಳಿಗೆ ಉಪ್ಪನ್ನು ಕೊಡಲಾಗುತ್ತಿತ್ತು. ಕಾಡುಮೇಕೆಗಳು ಇದಕ್ಕೆ ಹೊರತಾಗಿರಲಿಲ್ಲ. ನೈಸರ್ಗಿಕ ಉಪ್ಪು ನೆಕ್ಕಲುಗಳನ್ನು ಕಾಡುಮೇಕಗಳ ಹಿಂಡುಗಳು ಮುತ್ತಿಕೊಂಡಿರುವುದನ್ನು ಅವನು ನೋಡಿದ್ದ. ಮೋಜ್‌ಗ ಉಪ್ಪಿನ ಆಸೆಯನ್ನಿಡಲು ಅವನು ನಿರ್ಧರಿಸಿದ.

ಕಾರ್ನೋಜ್ ಮತ್ತು ಸಿಮಿಲ್ ಮೋಜ್‌ಗೆ ಉಪ್ಪಿನ ಆಸೆ ತೋರಿಸಿ ಶಿಖರಕ್ಕೆ ಹೋಗುವ ಹಾದಿಯಲ್ಲಿ ಪ್ರತಿ ದಿನವೂ ಸ್ವಲ್ಪ ಸ್ವಲ್ಪ ದೂರ ಅದು ಹೋಗುವಂತೆ ಮಾಡಿದರು. ಆದರೆ ಅವು ತೆಗೆದುಕೊಂಡು ಹೋಗಿದ್ದ ಉಪ್ಪು ಮುಗಿದ ಕೂಡಲೇ ಮೋಜ್ ಮಂಡ್‌ಗೆ ವಾಪಸು ಓಡಿ ಬರುತ್ತಿತ್ತು. ಇದು ಸ್ವಲ್ಪ ನಿರಾಶಾದಾಯಕವಾಗಿದ್ದರೂ, ಮೋಜ್ ಒಂದು ದಿನ ಸ್ವಾತಂತ್ರ್ಯವನ್ನು ಕಂಡುಕೊಳ್ಳುತ್ತದೆ ಹಾಗೂ ಮಂಡ್ ಮತ್ತು ಅಲ್ಲಿಯ ಸ್ನೇಹಿತರಿಗಿಂತ ಪರ್ವತದ ಕರೆ ಅದಕ್ಕೆ ಹೆಚ್ಚು ಬಲವಾಗುತ್ತದೆ ಎಂಬ ಆಸೆಯನ್ನು ಕಾರ್ನೋಜ್ ಮತ್ತು ಸಿಮಿಲ್ ಬಿಡಲಿಲ್ಲ.

ಈ ಮಧ್ಯೆ ಮೋಜ್ ಒಮ್ಮೆ ತೀವ್ರ ಅಪಾಯಕ್ಕೆ ಈಡಾಯಿತು. ಉಪ್ಪಿನ ಮೇಲೆ ಅದಕ್ಕಿದ್ದ ಆಸೆಯೇ ಇದಕ್ಕೆ ಕಾರಣವಾಗಿತ್ತು. ಹಾಲಿನ ಪಾತ್ರೆಗಳು, ಮಜ್ಜಿಗೆ ಕಡೆಯುವ ಪಾತ್ರೆಗಳು ಮತ್ತು ಹಾಲಿಗೆ ಸಂಬಂಧಿಸಿದ ಇತರ ವಸ್ತುಗಳನ್ನು ತೋಡರು ತಮ್ಮ ಹೈನಿನ ಮನೆಗಳಲ್ಲಿಡುತ್ತಾರೆ. ಇವುಗಳು ಅವರಿಗೆ ಬಹಳ ವಿಶೇಷವಾದ ಮತ್ತು ಪವಿತ್ರವಾದ ಸ್ಥಾನಗಳು. ಪಲೋಲ್ ಎಂದು ಕರೆಯಲಾಗುವ ಪಶುಸಂಗೋಪಕ – ಅರ್ಚಕ ಪ್ರತಿ ಹೈನಿನ ಮನೆಯ ಮೇಲ್ವಿಚಾರಕನಾಗಿರುತ್ತಾನೆ. ತೋಡರ ಎಮ್ಮೆಗಳನ್ನು ಬಿಟ್ಟು ಹೆಂಗಸರು, ಅಪರಿಚಿತರು ಮತ್ತು ಉಳಿದ ಪ್ರಾಣಿಗಳನ್ನು ಹೈನಿನ ಮನೆಯ ಸಮೀಪ ಸೇರಿಸುವುದಿಲ್ಲ. ಪಲೋಲ್ ಮಾತ್ರ ಅದನ್ನು ಪ್ರವೇಶಿಸಬಲ್ಲ. ಹಾಲು ಹಾಗೂ ಮನೆಯಲ್ಲಿಟ್ಟ ಪಾತ್ರೆ ಪಡಗಗಳನ್ನೂ ಸಹ ಪವಿತ್ರ ಎಂದು ಪರಿಗಣಿಸಲಾಗುವುದು. ಮೋಫ್‌ಮಂಡ್‌ಗೆ ಸಮೀಪದ ದಿಬ್ಬವೊಂದರ ಮೇಲೆ ಒಂದು ಪವಿತ್ರ ಹೈನಿನ ಮನೆ ಇತ್ತು. ಕೆಲವು ಪವಿತ್ರ ಹೈನಿನ ಮನೆಗಳಿಗೆ ಶಂಖುವಿನಾಕಾರದ ಛಾವಣಿ ಇರುತ್ತದೆ ಹಾಗೂ ಮೋಫ್‌ಮಂಡ್‌ನ ಹೈನಿನ ಮನೆಗೆ ಇಂತಹ ಛಾವಣಿ ಇತ್ತು. ಮೋಜ್‌ಗೆ ಉಪ್ಪು ಎಷ್ಟು ಇಷ್ಟವಾಗಿತ್ತೆಂದರೆ ಅದು ಉಪ್ಪನ್ನು ಹುಡುಕಿಕೊಂಡು ಎಲ್ಲ ಕಡೆಗೂ ಹೋಗುತ್ತಿತ್ತು. ಒಂದು ದಿನ ಪಲೋಲ್ ಹೊರಗಡೆ ಹಾಲು ಕರೆಯುತ್ತಿದ್ದಾಗ ಅದು ಉಪ್ಪನ್ನು ಹುಡುಕಿಕೊಂಡು ಪವಿತ್ರ ಹೈನಿನ ಮನೆ ಹೊಕ್ಕುಬಿಟ್ಟಿತು. ಅವನು

ಒಳಗಡೆ ಹೋದಾಗ ಪವಿತ್ರವಾದ ಪಾತ್ರೆಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದನ್ನೂ ಮಣ್ಣಿನ ಪಾತ್ರೆಗಳು ಒಡೆದುಹೋಗಿದ್ದನ್ನೂ ನೋಡಿದನು. ಹೈನಿನ ಮನೆಯ ಅತ್ಯಂತ ಪವಿತ್ರವಾದ ಒಳಮನೆಯಲ್ಲಿ ಮೋಜ್ ಇತ್ತು. ಪಲೋಲ್ ಬೊಬ್ಬೆ ಹಾಕಿ ಮಂಡ್‌ನತ್ತ ಧಾವಿಸಿದನು. ಅವನ ಬೊಬ್ಬೆಯನ್ನು ಕೇಳಿ ಎಲ್ಲರೂ ಹೊರಗೆ ಬಂದರು. ಪಲೋಲ್ ಎದೆ ಬಡಿದುಕೊಳ್ಳುತ್ತಾ, "ಮಹಾಪಾಪದ ಕೆಲಸ ಆಗಿದೆ. ಪವಿತ್ರ ಸ್ಥಳಕ್ಕೆ ಮೈಲಿಗೆಯಾಗಿದೆ. ನಮ್ಮ ಮೇಲೆ ದೊಡ್ಡ ಶಾಪ ಬೀಳಲಿದೆ" ಎಂದು ಕೂಗಿಕೊಂಡನು. ಮೋಜ್ ಮುಗ್ಧತೆಯಿಂದ ಅವನ ಹಿಂದೆಯೇ ಬಂತು. ಪಲೋಲ್ ಅದನ್ನು ಅಟ್ಟಿಸಿಕೊಂಡು ಹೋದನು. ಉಳಿದವರು ಅವನ ಜೊತೆ ಸೇರಿದರು. ಒಂದೇ ಕ್ಷಣದಲ್ಲಿ ಮೋಜ್ ಯಾರೂ ಪ್ರೀತಿಸದ ಪ್ರಾಣಿಯಾಯಿತು. ದ್ವೇಷಕ್ಕೆ ಗುರಿಯಾಯಿತು. ತೋಡರ ಹಳೆಯ ಹಾಡಿನ ಮಾತುಗಳಲ್ಲಿ:

"ಅದು ಹೋಗಬಾರದ ಪವಿತ್ರ ಸ್ಥಳಗಳಿಗೆ ಹೋಯಿತು
ಅದು ನೋಡಬಾರದ ದೇವತೆಗಳನ್ನು ನೋಡಿತು"

ಪವಿತ್ರ ಹೈನಿನ ಮನೆಗೆ ಮೈಲಿಗೆಯಾಗಿದೆ ಎಂದಾದರೆ ಆ ಮನೆ ಮತ್ತು ಅರ್ಚಕ ಶುದ್ಧೀಕರಣಕ್ಕೊಳಗಾಗಬೇಕಾದ್ದು ತೋಡರ ಸಂಪ್ರದಾಯದ ನಿಯಮ. ಕೆಲವು ಸಂದರ್ಭಗಳಲ್ಲಿ ಶೋಲದಲ್ಲಿ ಬಹುತೇಕ ಬೆತ್ತಲೆಯಾಗಿ ಚಳಿಯಲ್ಲಿ ರಾತ್ರಿಗಳನ್ನು ಕಳೆಯಬೇಕಾದಂತಹ ಕಠಿಣ ವ್ರತಗಳನ್ನು ಪಲೋಲ್ ಕೈಗೊಳ್ಳಬೇಕಾಗುತ್ತದೆ. ಮೊದಲಿನ ಕಾಲದಲ್ಲಿ ಎಮ್ಮೆಯನ್ನು ಬಲಿ ಕೊಡುವ ಅಗತ್ಯವೂ ಇತ್ತು. ಪಲ್ಲೋಲ್‌ಗೆ ಇದೆಲ್ಲಾ ನೆನಪಾದಾಗ ಅವನ ಕೋಪ ಇನ್ನಷ್ಟು ಹೆಚ್ಚಾಯಿತು. ಮೋಜ್‌ಅನ್ನು ಉಗ್ರ ಕೋಪದಿಂದ ಅಟ್ಟಿಸಿಕೊಂಡು ಹೋದ. ಇದು ಒಂದು ಆಟ ಎಂದು ಮೊದಲು ಭಾವಿಸಿದ ಮೋಜ್ ಕೋಲಿನಿಂದ ಮತ್ತು ಕಲ್ಲುಗಳಿಂದ ಏಟು ಬಿದ್ದಾಗ ಇದು ಆಟವಲ್ಲ ಎಂದು ಅರಿತುಕೊಂಡಿತು. ಅದು ಎಷ್ಟು ಜೋರಾಗಿ ಓಡಲು ಸಾಧ್ಯವೋ ಅಷ್ಟು ಜೋರಾಗಿ ಓಡಿ, ಮುಕರ್ತಿ ಬೆಟ್ಟದ ಕಲ್ಲುಗುಂಡುಗಳ ದಾರಿಯ ಇಳುಕಲು ಮುಟ್ಟುವವರೆಗೆ ಓಟವನ್ನು ನಿಲ್ಲಿಸಲಿಲ್ಲ. ಮೋಜ್‌ಗೆ ಅನೇಕ ಗಾಯಗಳಾಗಿದ್ದೇ ಅಲ್ಲದೆ, ಸಿಮಿಲ್ ತಯಾರಿಸಿದ್ದ ಸುಂದರ ಕತ್ತಿನ ಪಟ್ಟಿಯೂ ಕತ್ತಿನಿಂದ ಹರಿದು ಕಿತ್ತುಹೋಯಿತು.

ಪವಿತ್ರ ಹೈನಿನ ಮನೆ ಮೈಲಿಗೆಯಾಗುವುದು ಒಂದು ಗಂಭೀರವಾದ ವಿಚಾರ. ನೋಯಂ ಅಥವಾ ಜಾತಿ ಸಭೆಯನ್ನು ಏರ್ಪಡಿಬೇಕು. ಈ ಸಭೆಯಲ್ಲಿ ಮೋಜ್‌ನ ಪರವಾಗಿ ಕೋಡನ್ ವಿನಂತಿ ಮಾಡಿಕೊಂಡರೂ, ಮೇಕೆಮರಿಯನ್ನು ಮಂಡ್‌ನಿಂದ ಬಹಿಷ್ಕರಿಸಬೇಕೆಂದು ಘೋಷಿಸಲಾಯಿತು. ಅಂದರೆ ಅದು ಮಂಡ್ ಅನ್ನು ಎಂದಾದರೂ ಪ್ರವೇಶಿಸಿದರೆ ಅದನ್ನು ಕೊಲ್ಲಬಹುದಾಗಿತ್ತು. ಒಬ್ಬ ಬೇಟೆಗಾರನಿಂದ ಮೋಜ್‌ಗೆ ಗುಂಡಿಟ್ಟು ಕೊಲ್ಲಿಸಬೇಕೆಂದು ಪಲೋಲ್ ಹೇಳಿದ. ಆದರೆ ಕೋಡನ್ ಇದಕ್ಕೆ ಒಪ್ಪಲಿಲ್ಲ. "ನಮ್ಮ ಪವಿತ್ರ ಸ್ಥಳಗಳನ್ನು ಈ ಪ್ರಾಣಿ ಪುನಃ ಮೈಲಿಗೆ ಮಾಡಬಾರದೆಂಬುದೇ

ನಮ್ಮ ಏಕಮಾತ್ರ ಚಿಂತೆ" ಎಂದು ಅವನು ಹೇಳಿದ. ಪಲೋಲ್‌ನ ಸಿಟ್ಟನ್ನು ಶಮನಗೊಳಿಸಲು ಶುದ್ಧೀಕರಣ ಕಾರ್ಯಕ್ಕೆ ಅಗತ್ಯವಾದ ಶ್ರಮದ ಕೆಲಸದಲ್ಲಿ ಹೆಚ್ಚಿನ ಪಾಲನ್ನು ಕೋಡನ್ ಕಾರ್ನೋಜನಿಗೆ ವಹಿಸಿದ.

ಕಾರ್ನೋಜನಿಗೆ ಬಹಳ ತಳಮಳವಾಯಿತು. ಮೋಜ್‌ಗೆ ಉಪ್ಪಿನ ಮೇಲೆ ಆಸೆ ಅಷ್ಟೊಂದು ಹೆಚ್ಚಾಗುವುದಕ್ಕೆ ತಾನೇ ಕಾರಣ ಎಂದು ಅವನು ತನ್ನನ್ನು ತಾನೇ ನಿಂದಿಸಿಕೊಂಡ. ಈ ಮಧ್ಯೆ, ಮೋಜ್ ಕಣ್ಮರೆಯಾಗಿತ್ತು. ಬಹಳ ಹೊತ್ತು ಹುಡುಕಿದ ನಂತರ ಮುಕರ್ತಿ ಬೆಟ್ಟದ ಏರಿನ ಅರ್ಧ ದಾರಿಯಲ್ಲಿ ಕಲ್ಲುಗುಂಡುಗಳ ಮಧ್ಯೆ ಬಚ್ಚಿಟ್ಟುಕೊಂಡಿದ್ದ ಮೋಜ್ ಅನ್ನು ಕಾರ್ನೋಜ್ ಕಂಡ. ತನ್ನನ್ನು ಕಂಡ ಕೂಡಲೇ ಮೋಜ್ ತನ್ನ ಬಳಿ ಓಡೋಡಿ ಬರುತ್ತದೆ ಎಂದು ಅವನು ನಿರೀಕ್ಷಿಸಿದ್ದ. ಆದರೆ ಮೋಜ್ ಬೆಟ್ಟದ ಶಿಖರದತ್ತ



ಮೇಲೇರಿ ಹೋಗಿ ಕೋಡುಗಳಲ್ಲಿ ಮರೆಯಾಯಿತು. ಕಾರ್ನೋಜ್‌ಗೆ ಅಲ್ಲಿಯವರೆಗೂ ಅದನ್ನು ಹಿಂಬಾಲಿಸುವುದು ಸಾಧ್ಯವಾಗಲಿಲ್ಲ.

ತಾನೂ ಸೇರಿದಂತೆ ಎಲ್ಲ ಮನುಷ್ಯರ ಬಗ್ಗೆ ಮೋಜ್‌ಗೆ ಸಂಶಯ, ಅಪನಂಬಿಕೆ ಉಂಟಾಗಿದೆ ಎಂಬುದನ್ನು ಕಾರ್ನೋಜ್ ಅರಿತುಕೊಂಡ. ಮೋಜ್ ಈಗ ಮರಿಯಾಗಿ ಉಳಿದಿಲ್ಲ, ಅದು ಇದ್ದಕ್ಕಿದ್ದಂತೆ ಬಲಿತ ಪ್ರಾಣಿಯಾಗಿದೆ ಎಂಬುದನ್ನು ಅವನು ಗಮನಿಸಿದ. ಇದರಿಂದ ಕಾರ್ನೋಜನಿಗೆ ದುಃಖವೂ ಆಯಿತು, ಸಂತೋಷವೂ ಆಯಿತು. ತನ್ನ ಸಾಕುಪ್ರಾಣಿ ತನ್ನನ್ನು ಈಗ ನಂಬುತ್ತಿಲ್ಲ ಎಂಬ ಅನಿಸಿಕೆಯಿಂದ ಅವನಿಗೆ ದುಃಖವಾಯಿತಾದರೂ, ತನ್ನನ್ನು ಈಗ ಅದು ಅವಲಂಬಿಸಿಲ್ಲ ಎಂಬ ಅಂಶದಿಂದ ಸಮಾಧಾನವಾಯಿತು.

ಮೋಜ್ ಮಂಡ್‌ಗೆ ಹಿಂತಿರುಗಲು ಪ್ರಯತ್ನಿಸಿದರೆ ಅದನ್ನು ಬೆಟ್ಟದ ಶಿಖರದವರೆಗೂ ಅಟ್ಟಿಸಿ ಓಡಿಸು ಎಂದು ಕಾರ್ನೋಜ್ ಕೂಚ್‌ಗೆ ಅಪ್ಪಣೆ ಮಾಡಿದ. ಕೂಚ್‌ಗೆ ಆಶ್ಚರ್ಯವಾಯಿತು. ಆದರೂ ವಿಧೇಯ ನಾಯಿಯಾಗಿದ್ದ ಅದು ತನ್ನ ಒಡೆಯನ ಆಜ್ಞೆಯನ್ನು ಪಾಲಿಸಲು ಸಿದ್ಧವಾಗಿತ್ತು.

ಮೋಜ್‌ಗೆ ಉಪ್ಪಿನ ರುಚಿಯನ್ನು ತೋರಿಸಿದ್ದರಿಂದ, ಈ ಕಾಡುಮೇಕೆ ಅದರ ಆಕರ್ಷಣೆಯಿಂದ ಮಂಡ್‌ಗೆ ಹಿಂದಿರುಗಲು ಪ್ರಯತ್ನಿಸಬಹುದು ಎಂದು ಕಾರ್ನೋಜ್ ಭಾವಿಸಿದ. ಅದು ಮಂಡ್‌ಗೆ ಹಿಂದಿರುಗುವುದನ್ನು ತಪ್ಪಿಸುವುದಕ್ಕೆ ಬೆಟ್ಟದ ಮೇಲೇ ಒಂದು ಸಣ್ಣ ಉಪ್ಪು ನೆಕ್ಕಲನ್ನು ಸಿದ್ಧಗೊಳಿಸುವುದೇ ಅತ್ಯುತ್ತಮ ಮಾರ್ಗ ಎಂದು ಅವನು ನಿರ್ಧರಿಸಿದ. ಕಲ್ಲುಗುಂಡುಗಳ ನಡುವೆ ಅವನು ಒಂದು ಹಳ್ಳವನ್ನು ಅಗೆದು ಅದರಲ್ಲಿ ಸ್ವಲ್ಪ ಉಪ್ಪನ್ನು ಹಾಕಿಟ್ಟ ಹಾಗೂ ಖಾಲಿಯಾದಾಗಲೆಲ್ಲಾ ಉಪ್ಪು ಹಾಕಿಡುತ್ತಿದ್ದ. ಅವನು ಅದನ್ನು ಆಗಾಗ ಮಾಡಬೇಕಾದ ಅಗತ್ಯವಿರಲಿಲ್ಲ. ಏಕೆಂದರೆ ಮಣ್ಣು ಉಪ್ಪನ್ನು ಹೀರಿಕೊಂಡು ಅದೊಂದು ನೈಸರ್ಗಿಕ ಉಪ್ಪು ನೆಕ್ಕಲಾಗುತ್ತಿತ್ತು.

ಕಾಲಕ್ರಮೇಣ, ಮೋಜ್‌ಗೆ ಆತ್ಮವಿಶ್ವಾಸ ಬೆಳೆದಂತೆ ಅದು ಬೆಟ್ಟದ ತುದಿಯಲ್ಲಿ ತಾನು ಅಡಗಿದ್ದ ಸ್ಥಾನದಿಂದ ಹೊರಬಂದು ಆಹಾರಕ್ಕಾಗಿ ಹೆಚ್ಚು ಹೆಚ್ಚು ದೂರ ಹೋಗಲು ಪ್ರಾರಂಭಿಸಿತು. ತನಗೆ ಬೇಕಾದ್ದೆಲ್ಲವೂ ಮುಕರ್ತಿ ಬೆಟ್ಟದಲ್ಲೇ ಅದಕ್ಕೆ ದೊರೆಯುತ್ತಿತ್ತು. ಆಹಾರ, ಶಿಲೆಗಳ ಮಧ್ಯದಿಂದ ಒಸರುತ್ತಿದ್ದ ನೀರು ಹಾಗೂ ಉಪ್ಪು ಸಹ ಅದಕ್ಕೆ ಲಭ್ಯವಿತ್ತು. ಒಡನಾಟಕ್ಕೆ ತನ್ನನ್ನು ನೋಡಲು ಆಗಾಗ ಬರುತ್ತಿದ್ದ ಕಾರ್ನೋಜ್, ಸಿಮಿಲ್ ಇವ್ವೇ ಇದ್ದರು. ಅವರ ಜೊತೆಗೆ ಕೂಚ್ ಸಹ ಬರುತ್ತಿತ್ತು. ಆದರೆ ಅವರೆಲ್ಲರೂ ಮೋಜ್‌ನಿಂದ ಸ್ವಲ್ಪ ದೂರವಿರಬೇಕಾಗುತ್ತಿತ್ತು. ಏಕೆಂದರೆ ತನ್ನ ಬೆನ್ನು ಸವರುವ ದಿನಗಳು ಹೋದವು ಎಂಬುದನ್ನು ಅದು ಸ್ಪಷ್ಟಪಡಿಸಿತ್ತು. ಅದು ಈಗ ನಿಜವಾಗಿ ವನ್ಯಪ್ರಾಣಿಯಾಗಿತ್ತು.



# VI

ಚಿರತೆಗಳು ಕೌಶಲದಿಂದ ಬೇಟೆಯಾಡುವ ಪ್ರಾಣಿಗಳು. ಹುಲಿಗಳಿಗೆ ಹೋಲಿಸಿದರೆ ಗಾತ್ರದಲ್ಲಿ ಸಣ್ಣವಾಗಿದ್ದರೂ, ಅವು ಶಕ್ತಿಯುತವೂ, ಬಹಳ ಚುರುಕಿನ ಪ್ರಾಣಿಗಳೂ ಆಗಿವೆ. ಅವುಗಳ ಮೈ ಚರ್ಮ ಹೊಳೆಯದೆ ಮಂದವಾಗಿರುವುದರಿಂದಲೂ, ಕಪ್ಪು ಚುಕ್ಕೆಗಳಿಂದ ಕೂಡಿರುವುದರಿಂದಲೂ, ಅವು ಕಣ್ಣಿಗೆ ಸುಲಭವಾಗಿ ಬೀಳುವುದಿಲ್ಲ. ಸಾಕುಪ್ರಾಣಿಗಳನ್ನು ಕೊಂದು ತಿನ್ನುವ ಅಭ್ಯಾಸ ಮಾಡಿಕೊಂಡ ಚಿರತೆ ತನ್ನ ಕೌಶಲದ ಜೊತೆಗೆ ಕುಯುಕ್ತಿಯನ್ನೂ ಬಳಸುವುದರಿಂದ ಅದು ಮತ್ತಷ್ಟು ಅಪಾಯಕಾರಿಯಾಗುತ್ತದೆ.

ಅಂತಹ ಒಂದು ಚಿರತೆ ಮೋಫ್‌ಮಂಡ್‌ನ ಬಳಿ ಓಡಾಡಿಕೊಂಡಿತ್ತು. ಅದು ಸ್ವಲ್ಪ ಕುಂಟುತ್ತಿದ್ದುದರಿಂದ ತೋಡರು ಅದನ್ನು 'ಕುಂಟ' ಎನ್ನುತ್ತಿದ್ದರು. ಕಾಡಿನ ಪ್ರಾಣಿಗಳಿಗಿಂತ ತೋಡರ ಎಮ್ಮೆ ಕರುಗಳನ್ನು ಹಿಡಿಯುವುದು ಕುಂಟ ಚಿರತೆಗೆ ಇಷ್ಟವಾಗಿತ್ತು. ಏಕೆಂದರೆ ಕರುಗಳನ್ನು ಹಿಡಿಯುವುದು ಸುಲಭವಾಗಿತ್ತು. ಈ ಚಿರತೆ ತೋಡರ ಮಂಡ್‌ಗಳಿಗೆ ಒಂದಾದ ನಂತರ ಇನ್ನೊಂದರಂತೆ ಭೇಟಿ ನೀಡಿ, ತೋಡರ ಕಣ್ಣೆದುರಿನಲ್ಲೇ ಕರುಗಳನ್ನು ಹಿಡಿದುಕೊಂಡು ಹೋಗುತ್ತಿತ್ತು.

ಮೋಫ್‌ಮಂಡ್‌ನ ತೋಡರು ಈ ಹಂತಕನ ವಿರುದ್ಧ ಎಚ್ಚರಿಕೆಯಿಂದಿದ್ದರು. ಆದರೆ ಅವರು ಸದಾ ಜಾಗೃತರಾಗಿರುವುದು ಸಾಧ್ಯವಿರಲಿಲ್ಲ. ಅದರ ದಾಳಿಯ ನಿರೀಕ್ಷೆ ಅತ್ಯಂತ ಕಡಿಮೆ ಇದ್ದಾಗಲೇ ಕುಂಟ ಚಿರತೆ ಎರಗುತ್ತಿತ್ತು. ತೋಡ ನಾಡನ್ನು ಆಗಾಗ ಆವರಿಸುವ ಮಂಜು, ಅಲ್ಲಿ ಆಗಾಗ ಬೀಳುವ ಮಳೆಯಿಂದಾಗಿ ಚಿರತೆಗೆ ಸಹಾಯವಾಗುತ್ತಿತ್ತು. ಕೆಲವೊಮ್ಮೆ ಮಂಜು ಎಷ್ಟು ದಟ್ಟವಾಗಿರುವುದೆಂದರೆ, ಕೆಲವೇ ಮೀಟರ್‌ಗಳ ದೂರದ ವಸ್ತುವೂ ಸ್ಪಷ್ಟವಾಗಿ ಕಾಣಿಸುವುದಿಲ್ಲ.

ಕುಂಟ ಚಿರತೆ ಕೆಲವು ತಿಂಗಳುಗಳ ಕಾಲ ಮೋಫ್‌ಮಂಡ್‌ಗೆ ಕಾಲಿಟ್ಟಿರಲಿಲ್ಲ ಹಾಗೂ ಮಂಡ್‌ನ ತೋಡರು ಅದನ್ನು ಬಹುತೇಕ ಮರೆತೇ ಬಿಟ್ಟಿದ್ದರು ಆ ಸಮಯದಲ್ಲಿ ಮಂಡ್‌ಗೆ ಭೇಟಿ ಕೊಡಲು ಅದು ನಿರ್ಧರಿಸಿತು. ಶೋಲವನ್ನು ದಾಟಿ ಅದು ಬರುತ್ತಿದ್ದಂತೆ, ಜಡಿ ಮಳೆ ಪ್ರಾರಂಭವಾಗಿ ಮೋಡಗಳು ಕೆಳಮಟ್ಟದಲ್ಲಿ ಹರಡಿದವು. ಮುಕರ್ತಿ ಬೆಟ್ಟದ ಸುತ್ತಲೂ ಕಣ್ಣಿಗೆ ಯಾವುದೂ ಸ್ಪಷ್ಟವಾಗಿ ಕಾಣದೆ

ಹೋಯಿತು. ಚಿರತೆ ತನ್ನ ಗತಿಯನ್ನು ಚುರುಕುಗೊಳಿಸಿ ಮಂಡ್‌ಗೆ ಹೋಗುವ ಏರಿಯನ್ನು ತಲುಪಿತು. ಅದರ ಮುಂದೆ ಎಮ್ಮೆ ಕರುಗಳ ಹಿಂಡೊಂದಿತ್ತು. ತೋಡ ಹುಡುಗನೊಬ್ಬ ಅವುಗಳನ್ನು ಮನೆಯ ಕಡೆ ಅಟ್ಟುತ್ತಿದ್ದ. ಅವನು ಅವಸರ ಮಾಡುತ್ತಿದ್ದರೂ, ಕರುಗಳು ನಿಧಾನವಾಗಿ ನಡೆಯುತ್ತಿದ್ದವು.

ಜಿಂಕೆ, ಮೇಕೆ ಮುಂತಾದ ಹುಲ್ಲು, ಸಸಿಗಳನ್ನು ತಿನ್ನುವ ಪ್ರಾಣಿಗಳ ಘ್ರಾಣೇಂದ್ರಿಯ ಬಹಳ ಚುರುಕು. ಕಣ್ಣು ಮತ್ತು ಕಿವಿಗಿಂತ ವಾಸನೆ ಹಿಡಿಯುವ ಮೂಗು ಅವುಗಳಲ್ಲಿ ಚೆನ್ನಾಗಿ ಕೆಲಸ ಮಾಡುತ್ತದೆ. ಬಹಳ ದೂರದಲ್ಲಿರುವ ಶತ್ರುವಿನ ವಾಸನೆಯನ್ನು – ಅವಿತುಕೊಂಡಿರುವ ಶತ್ರುವಿನ ವಾಸನೆಯನ್ನೂ ಸಹ – ಅವು ಗ್ರಹಿಸುತ್ತವೆ. ಆದರೆ ಗಾಳಿ ಅವುಗಳಿಗೆ ಅನುಕೂಲವಾದ ದಿಕ್ಕಿನಲ್ಲಿ ಬೀಸುತ್ತಿರಬೇಕಷ್ಟೆ. ಪ್ರಾಣಿಗಳನ್ನು ಕೊಲ್ಲುವ ಹುಲಿಗಳು ಮತ್ತು ಚಿರತೆಗಳಿಗೆ ಇದು ಗೊತ್ತು. ಅದರಿಂದ ಅವು ತಮ್ಮ ಬೇಟೆಯ ತಂತ್ರವನ್ನು ಸೂಕ್ತವಾಗಿ ಯೋಜಿಸುತ್ತವೆ. ತಾವು ಹಿಡಿಯಲು ಉದ್ದೇಶಿಸಿರುವ ಪ್ರಾಣಿಗಳ ಕಡೆಯಿಂದ ಗಾಳಿ ತಮ್ಮತ್ತ ಬೀಸುತ್ತಿರುವುದನ್ನು ನೋಡಿಕೊಂಡು ನಂತರ ಬೇಟೆಯತ್ತ ತಮ್ಮ ಕೊನೆಯ ಚಲನೆಯನ್ನು ಪ್ರಾರಂಭಿಸುತ್ತವೆ.

ಕುಂಟ ಚಿರತೆ ಎಮ್ಮೆಕರುಗಳನ್ನು ಹಿಂಬಾಲಿಸಿದಂತೆ, ಗಾಳಿ ಅದಕ್ಕೆ ಅನುಕೂಲವಾಗಿ ಬೀಸುತ್ತಿತ್ತು. ಆದರೆ ಪರ್ವತದ ಹೆಗಲಿನ ಮೇಲೆ ಚಿರತೆಗಿಂತ ಎತ್ತರವಾದ ಸ್ಥಳದಲ್ಲಿ ಅದರ ಹಿಂದಕ್ಕೆ ಮೋಜ್ ಇತ್ತು. ಬೀಸುತ್ತಿದ್ದ ಗಾಳಿಯಿಂದ ಚಿರತೆಯ ವಾಸನೆ ಮೋಜ್‌ಗೆ ಬಂತು. ಇದು ಶತ್ರುವಿನ ವಾಸನೆಯೇ ಎಂದು ಅದರ ಹುಟ್ಟುಬುದ್ಧಿಗೆ ಹೊಳೆಯಿತು. ಕೂಡಲೇ ಅದು ಎಚ್ಚರಿಕೆಯ ಕೂಗನ್ನು ಹಾಕಿತು. ನೀಲಗಿರಿ ಕಾಡುಮೇಕೆಯ ಎಚ್ಚರಿಕೆಯ ಕೂಗು ಒಂದು ಸಿಳ್ಳು ಹಾಕಿದಂತೆ – ಅದು ಸ್ಪಷ್ಟವಾದ ಸಿಳ್ಳಲ್ಲ, ಸಿಳ್ಳು ಹಾಕುತ್ತಿರುವವ ಗೊರಗುಟ್ಟುತ್ತಾ ಸಿಳ್ಳು ಹಾಕಿದಂತೆ. ಸಿಳ್ಳು ಗಟ್ಟಿಯಾಗಿಲ್ಲದಿದ್ದರೂ, ತೋಡ ನಾಡಿನ ನಿಶ್ಶಬ್ದ ವಾತಾವರಣದಲ್ಲಿ ಬಹಳ ದೂರದವರೆಗೆ ಕೇಳಿಸುತ್ತದೆ. ಕೂಗು ಕೇಳಿಸುವವರಿಗೆಲ್ಲಾ ಅಪಾಯದ ಮುನ್ಸೂಚನೆ ದೊರಕುತ್ತದೆ. ಅದರ ಸಿಳ್ಳು ತೋಡ ಬಾಲಕನನ್ನು ಜಾಗ್ರತಗೊಳಿಸಿತು. ಅವನು ತಿರುಗಿ ನೋಡಿದಾಗ, ಚಿರತೆ ಮರದ ಮೇಲೆ ಬಗ್ಗಿ ಕುಳಿತದ್ದು ಕಾಣಿಸಿತು. ಎಮ್ಮೆಕರುಗಳ ಹಿಂಡಿನಿಂದ ಹಿಂದೆ ಬಿದ್ದಿದ್ದ ಕರುವಿನ ಮೆಲೆ ಕುಂಟ ಚಿರತೆಯ ಕಣ್ಣು ಬಿದ್ದಿತ್ತು. ಆದರೆ ಹುಡುಗ ತನ್ನ ಮೇಲೆ ಎರಗಲು ಚಿರತೆ ಸಿದ್ಧವಾಗುತ್ತದೆ ಎಂದು ಭಾವಿಸಿದ. ಅವನು "ಅಯ್ಯೋ, ಅಯ್ಯೋ, ಚಿರತೆ ನನ್ನ ಮೇಲೆ ಬೀಳುತ್ತಿದೆ" ಎಂದು ಕೂಗುತ್ತಾ ಅಲ್ಲಿಂದ ಓಡಿದ. ಅವನ ಹಿಂದೆ ಎಮ್ಮೆ ಕರುಗಳೂ ಓಡಿದವು. ಕುಂಟ ಚಿರತೆ ನಿರಾಶೆಯಿಂದ ಜೋರಾಗಿ ಒಮ್ಮೆ ಗರ್ಜಿಸಿ ಶೋಲದಲ್ಲಿ ಮರೆಯಾಯಿತು. ಚಿರತೆಯ ವಾಸನೆ ಬರುತ್ತಿದ್ದವರೆಗೆ ಮೋಜ್ ಎಚ್ಚರಿಕೆಯ ಸಿಳ್ಳು ಹಾಕುತ್ತಲೇ ಇತ್ತು.

ಪವಿತ್ರ ಹೈನಿನಮನೆ ಘಟನೆ ನಡೆದಂದಿನಿಂದ ಯಾರೂ ಮೋಜ್‌ನ ಹೆಸರೆತ್ತಿರಲಿಲ್ಲ. ಆದರೆ ಅಂದು ಸಂಜೆ ಮೋಜ್, ಹುಡುಗನ ಪ್ರಾಣ ಉಳಿಸಿತೆಂದು ಎಲ್ಲರೂ ಒಪ್ಪಿಕೊಂಡರು.

ಅದಾದ ಎರಡು ದಿನಗಳ ನಂತರ, ನಸುಕಿನಲ್ಲಿ ಇನ್ನೂ ಕತ್ತಲಿರುವಾಗಲೆ ಪಲೋಲ್ ಎಂದಿನಂತೆ ಹೈನಿನ ಮನೆಗಾಗಿ ನೀರು ತರಲು ಹೋದ. ಮೈಲಿಗೆಯನ್ನು ತೊಳೆಯಲು ಮಂಡ್‌ನಿಂದ ಸ್ವಲ್ಪ ದೂರದಲ್ಲಿ ಪರ್ವತದ ಮೇಲ್ಭಾಗದಲ್ಲಿನ ಒಂದು ಒರತೆಯನ್ನು ಹೈನಿನ ಮನೆಗಾಗಿ ಮೀಸಲಿಡಲಾಗಿತ್ತು. ಚಳಿ ಇದ್ದುದರಿಂದ ಪಲೋಲ್ ಕಪ್ಪು ಬಣ್ಣದ ಶಾಲನ್ನು ಹೊದ್ದಿದ್ದ. ಯಾವುದಾದರೂ ಪ್ರಾಣಿ ಸಿಗುತ್ತದೇನೋ ಎಂದು ಕುಂಟ ಚಿರತೆ ಮಂಡ್‌ನ ಹೊರವಲಯದಲ್ಲಿ ಸುಳಿದಾಡುತ್ತಿತ್ತು. ಪಲೋಲ್ ನಿಂತಿದ್ದರೆ ಚಿರತೆ ಅವನನ್ನು ಎಮ್ಮೆ ಕರು ಎಂದು ಭಾವಿಸುತ್ತಿರಲಿಲ್ಲ. ಆದರೆ ಅವನು ಮಡಿಕೆಗೆ ನೀರು ತುಂಬಲು ಬಗ್ಗಿದ್ದ ಹಾಗೂ ನಸುಕಿನಲ್ಲಿ ಮಂಜು ಮುಸುಕಿದ್ದರಿಂದ ಕುಂಟ ಚಿರತೆ ಅವನನ್ನು ಕರು ಎಂದು ತಿಳಿಯಿತು. ಈ ಅರ್ಚಕನ ಮೇಲೆ ಎರಗಲು ಚಿರತೆ ಸಿದ್ಧವಾಗತೊಡಗಿತು.

ಪೂರ್ವ ಆಗಸದಲ್ಲಿ ಸೂರ್ಯೋದಯದ ಕೆಂಪು ಪಟ್ಟೆಗಳು ಕಾಣಿಸಿಕೊಳ್ಳತೊಡಗಿದವು ಹಾಗೂ ಮೋಜ್‌ಗೆ ಇದು ಮೇಯುವ ಸಮಯವಾಗಿತ್ತು. ಆದರೆ ಮೇಯುವುದಕ್ಕೆ ಮೊದಲು, ಯಾವ ಶತ್ರುವೂ ಇಲ್ಲ ಎಂದು ಖಚಿತವಾಗಿ ತಿಳಿಯಲು ಸುತ್ತಲೂ ನೋಡುವುದು ಮೋಜ್‌ನ ಅಭ್ಯಾಸವಾಗಿತ್ತು. ಬೆಟ್ಟದ ಇಳಿಜಾರಿನ ದೃಶ್ಯ ಅದಕ್ಕೆ ಚೆನ್ನಾಗಿ ಕಾಣುತ್ತಿತ್ತು. ಚಿರತೆ ನಿಶ್ಚಲವಾಗಿದ್ದಿದ್ದರೆ, ಮಂದ ಬೆಳಕಿನಲ್ಲಿ ಮೋಜ್‌ಗೆ ಅದನ್ನು ನೋಡುವುದು ಸಾಧ್ಯವಾಗುತ್ತಿರಲಿಲ್ಲ. ಆದರೆ ಚಿರತೆ ಮೆಲ್ಲನೆ, ಕಳ್ಳ ಹೆಜ್ಜೆಗಳನ್ನಿಡುತ್ತಾ ಮುಂದೆ ಹೋಗುತ್ತಿತ್ತು. ಕಳವಳಗೊಂಡ ಮೋಜ್ ಕೂಡಲೆ ಎಚ್ಚರಿಕೆಯ ಸಿಳ್ಳನ್ನು ಹಾಕಿತು. ಪಲೋಲ್ ಅವಸರದಿಂದ ಮೇಲೆದ್ದು ತಿರುಗಿದ. ಅವನ ಹಿಂದೆ ಇನ್ನೇನು ಅವನ ಮೇಲೆ ಹಾರುವುದರಲ್ಲಿದ್ದ ಕುಂಟ ಚಿರತೆ ಇತ್ತು. ಪಲೋಲ್ ಮತ್ತು ಚಿರತೆ – ಇಬ್ಬರಿಗೂ ಪರಸ್ಪರರ ದರ್ಶನದಿಂದ ಗಾಬರಿಯಾಯಿತು. ಚಿರತೆ ಜೋರಾಗಿ ಗರ್ಜಿಸಿತು. ಅರ್ಚಕನ ಕಾಲುಗಳು ಸೀಸದ ತುಂಡುಗಳಂತಾಗಿ ಅವನು ಅಲ್ಲಾಡಲಾಗದೆ ಅಲ್ಲೇ ಸ್ತಬ್ಧವಾಗಿ ನಿಂತನು. ನಂತರ ಚಿರತೆ ಅಲ್ಲಿಂದ ಹಿಂತಿರುಗಿ ಹೋದಾಗ ಅರ್ಚಕನಿಗೆ ಹೋದ ಪ್ರಾಣ ಮರಳಿ ಬಂದಂತಾಯಿತು.

ಮುಂದಿನ ದಿನಗಳಲ್ಲಿ, ಕುಂಟ ಚಿರತೆಯಿಂದ ಪಲೋಲ್ ಹೇಗೆ ಸ್ವಲ್ಪದರಲ್ಲಿ ಪ್ರಾಣಾಪಾಯದಿಂದ ತಪ್ಪಿಸಿಕೊಂಡ ಎಂಬ ಬಗ್ಗೆ ಮಂಡ್‌ನ ಪ್ರತಿಯೊಬ್ಬರೂ ತಮ್ಮದೇ ಆದ ರೀತಿ ವರ್ಣನೆಯನ್ನು ಮಾಡತೊಡಗಿದರು. ಚಿರತೆ ನರಮನುಷ್ಯನನ್ನು ತಿನ್ನುವ ಪ್ರಾಣಿಯಾಗಿಬಿಟ್ಟಿದೆ ಹಾಗೂ ಮೋಜ್ ಸಕಾಲದಲ್ಲಿ ಎಚ್ಚರಿಕೆ ಸಿಳ್ಳು ಹಾಕದಿದ್ದರೆ ಅದು ಮನುಷ್ಯನೊಬ್ಬನನ್ನು ಕೊಲ್ಲುತ್ತಿತ್ತು ಎಂದು ಅವರಿಗೆ ಖಚಿತವಾಗಿಬಿಟ್ಟಿತ್ತು.

ವೃದ್ಧ ತೋಡನೊಬ್ಬನ ಅಂತ್ಯ ಸಂಸ್ಕಾರಕ್ಕೆ ಮಾಡಬೇಕಾದ ಏರ್ಪಾಡುಗಳ ಬಗ್ಗೆ ಚರ್ಚಿಸಲು ಕೆಲವು ಹಿರಿಯ ತೋಡರು ಸಭೆ ಸೇರಿದ್ದರು. ಮೋಜ್‌ನ ಮೇಲೆ ಇನ್ನೂ ಬಹಿಷ್ಕಾರ ಇರುವ ವಿಷಯವನ್ನು ಪ್ರಸ್ತಾಪಿಸಲು ಕೋಡನ್ ಆ ಸಂದರ್ಭವನ್ನು ಬಳಸಿಕೊಂಡ. ಸಭೆಯಲ್ಲಿ ಮೌನ ಆವರಿಸಿತು. ಆಗ "ಹೈನಿನ

ಮನೆಯನ್ನು ನಾವು ಶುದ್ಧೀಕರಿಸಿದ್ದೇವೆ, ಈ ಕಾರ್ಯದಲ್ಲಿ ಹೆಚ್ಚಿನ ಶ್ರಮದ ಕೆಲಸವನ್ನು ಕಾರ್ನೋಜನೇ ಮಾಡಿದ್ದಾನೆ" ಎಂದು ಮೊನೆಗಾರ ಕೋಡನ್ ಸೂಚಿಸಿದ. "ದ್ವೇಷವನ್ನು ಸದಾ ಕಾಲ ಹೊಂದಿರುವುದು ನಮ್ಮ ದೇವತೆಗಳಿಗೂ ಇಷ್ಟವಾಗುವುದಿಲ್ಲ" ಎಂದು ಪಲೋಲನೇ ಪುನಃ ಹೇಳಿದಾಗ ಎಲ್ಲರಿಗೂ ಆಶ್ಚರ್ಯವಾಯಿತು. ಆಗ ಎಲ್ಲರೂ ಒಂದೇ ಸಮಯದಲ್ಲಿ ಮಾತನಾಡಲು ತೊಡಗಿದರು. ಎಲ್ಲರ ಬಾಯಲ್ಲೂ ಮೋಜ್‌ನ ಹೊಗಳಿಕೆಯೇ. ಮೊನೆಗಾರನಿಗೆ ಅವರ ಭಾವನೆಗಳು ಅರ್ಥವಾದವು. ಅವನು ತನ್ನ ಕೈ ಎತ್ತಿ ಎಲ್ಲರೂ ಸುಮ್ಮನಾಗಬೇಕೆಂದು ಸೂಚಿಸಿದ. "ಮೋಜ್‌ನ ಮೇಲಿರುವ ಬಹಿಷ್ಕಾರವನ್ನು ತೆಗೆಯೋಣವೇ? ಅದು ನಮಗೆ ಮಾಡಿರುವ ಉಪಕಾರಕ್ಕಾಗಿ ನಾವು ಅದನ್ನು ಕಾಪಾಡಲೂ ಬೇಕು" ಎಂದು ಅವನೆಂದಾಗ ಸಭೆ ಹರ್ಷೋದ್ಗಾರಗಳಿಂದ ತುಂಬಿತು.

ತೋಡರು ಈಗ ಜಾಗೃತರಾದ್ದರಿಂದ ಕುಂಟ ಚಿರತೆ ಎಮ್ಮೆಕರುಗಳ ಬೇಟೆಯನ್ನು ಬಿಟ್ಟು ಇತರ ಪಶುಗಳ ಶೋಧದಲ್ಲಿ ತೊಡಗಲು ನಿರ್ಧರಿಸಿತು. ಪ್ರಾಯದ ಕಾಡುಮೇಕೆ ಒಂಟಿಯಾಗಿರುವುದನ್ನು ಅದು ಗಮನಿಸಿತ್ತು. ಹಿಂಡಿನಲ್ಲಿರುವ ಪ್ರಾಣಿಗಳನ್ನು ಬೇಟೆಯಾಡುವುದು ಸುಲಭವಲ್ಲ, ಆದ್ದರಿಂದ ಈ ಪ್ರಾಯದ ಕಾಡುಮೇಕೆಯನ್ನು ಹಿಡಿಯುವ ಪ್ರಯತ್ನದಲ್ಲಿ ಅದೃಷ್ಟವಿದೆಯೇನೋ ನೋಡೋಣ ಎಂದು ಅದು ನಿರ್ಧರಿಸಿತು.

ಎಮ್ಮೆಕರುಗಳಿಗೆ ಹೋಲಿಸಿದರೆ ಮೋಜ್ ಅಷ್ಟೇನೂ ಅಸಹಾಯಕವಾಗಿರಲಿಲ್ಲ. ಅದರ ಇಂದ್ರಿಯಗಳು ಹೆಚ್ಚು ಚುರುಕಾಗಿದ್ದವು ಹಾಗೂ ಅದು ಯಾವಾಗಲೂ ಎತ್ತರದ ಪ್ರದೇಶದಲ್ಲಿ ಇರುತ್ತಿದ್ದುದರಿಂದ, ಕೆಳಗಡೆಯಿಂದ ಬರುವ ಯಾವ ಪ್ರಾಣಿಯನ್ನಾದರೂ ಪತ್ತೆ ಮಾಡಬಹುದಾಗಿತ್ತು. ಕಾಡುಮೇಕೆ ಚಿರತೆ ಬರುವುದನ್ನು ನೋಡಿ ಕಲ್ಲುಗುಂಡುಗಳ ಶಿಖರವನ್ನು ಹತ್ತಿತು. ಅಲ್ಲಿ ಅದು ಸುರಕ್ಷಿತವಾಗಿತ್ತು. ಮಾರನೆಯ ದಿನ ಬೆಳಿಗ್ಗೆಯೂ ಹಾಗೇ ಆಯಿತು. ಅನೇಕ ಸಲ ನಡೆಸಿದ ಪ್ರಯತ್ನಗಳು ವಿಫಲಗೊಂಡಾಗ ಚಿರತೆ ತಾಳ್ಮೆ ಕಳೆದುಕೊಂಡಿತು. ಅದಕ್ಕೆ ತುಂಬಾ ಹಸಿವಾಗಿತ್ತು. ಅದರಿಂದಾಗಿ ಅದು ಮೊಂಡು ಧೈರ್ಯ ತಾಳಿತು. ಚಿರತೆ ಬೇಟೆ ಪ್ರಾರಂಭಿಸಿದಾಗಿನಿಂದಲೂ ಮೋಜ್ ಎತ್ತರದ ಕಲ್ಲುಗುಂಡುಗಳ ಸ್ಥಳದಿಂದ ಕದಲಿರಲಿಲ್ಲ. ಹಾಗೂ ಅದು ತಿನ್ನಲು ಹೋಗಿದ್ದೂ ಬಹಳ ಕಡಿಮೆ ಸಲ. ಅದಕ್ಕೂ ಆಯಾಸವಾಗಿತ್ತು. ಹೀಗಾಗಿ ಅದೂ ಎಚ್ಚರ ಕಳೆದುಕೊಂಡಿತು. ಹುಲ್ಲು ಎಳೆಯದಾಗಿ, ಮೃದುವಾಗಿದ್ದ ಸ್ಥಳಕ್ಕೆ ಅದು ಇಳಿದು ಬಂದು ಗಬಗಬನೆ ಮೇಯಲಾರಂಭಿಸಿತು. ಶೋಲದ ತುದಿಯಿಂದ ಕುಂಟ ಚಿರತೆ ಮೋಜ್‌ನನ್ನು ಗಮನಿಸುತ್ತಿತ್ತು. ಅದು ಬೇಗ ಕಾಡುಮೇಕೆಯ ಮೇಲಿನ ಸ್ಥಾನವೊಂದಕ್ಕೆ ಹೋಯಿತು. ಅಲ್ಲಿ ತಲುಪಿದ ಕೂಡಲೆ, ದಾರಿಯಲ್ಲಿನ ಶಿಲೆಗಳ ಅನುಕೂಲ ಪಡೆದು ಮೆಲ್ಲನೆ ಮೋಜ್‌ನತ್ತ ಸರಿಯಲಾರಂಭಿಸಿತು. ಗಾಳಿ ಬೀಸುತ್ತಿದ್ದ ದಿಕ್ಕೂ ಚಿರತೆಗೆ ಅನುಕೂಲವಾಗಿತ್ತು. ಸಿಮಿಲ್ ಆ ಕಡೆಗೆ ನೋಡಿದಾಗ ಇಡೀ ದೃಶ್ಯ ಅವಳ ಕಣ್ಣಿಗೆ ಬಿತ್ತು. ಅವಳು ಕಾರ್ನೋಜ್‌ನನ್ನು ಕರೆದಳು. ಅವಳ ಕೂಗು ಕೇಳಿಸಿಕೊಂಡ ಎಲ್ಲರೂ ಹೊರಗೆ ಬಂದು ಚಿರತೆ

ಮತ್ತು ಅದರ ಬೇಟೆಯನ್ನು ನಿಸ್ಸಹಾಯಕರಾಗಿ ನೋಡತೊಡಗಿದರು. ಅವರು ಏನೂ ಮಾಡುವ ಸ್ಥಿತಿಯಲ್ಲಿರಲಿಲ್ಲ. ಬೇಟೆಗಾರ ಮತ್ತು ಬೇಟೆ ಎರಡೂ ತುಂಬ ದೂರದಲ್ಲಿದ್ದವು.

ಹಂತಕ ಚಿರತೆ ಮೋಜ್‌ನ ಮೇಲೆ ಎರಗುವಷ್ಟು ಸಮೀಪ ಹೋದಾಗ, ಬೀಸುತ್ತಿದ್ದ ಗಾಳಿಯ ದಿಕ್ಕು ಬದಲಾಗಿ ಮೋಜ್‌ಗೆ ಶತ್ರುವಿನ ವಾಸನೆ ಬಡಿಯಿತು. ಬಂದೂಕಿನಿಂದ ಹೊರಟ ಗುಂಡಿನಂತೆ ಮೋಜ್ ಶಿಖರದ ಕಡೆಗೆ ನಾಗಾಲೋಟದಿಂದ ಓಡಿತು. ಹಾಗೆ ಓಡುವಾಗ ಅದು ಚಿರತೆಯ ಸಮೀಪದಿಂದಲೇ ಹಾದು ಹೋಗಬೇಕಾಗಿತ್ತು. ಚಿರತೆ ಪಂಜದಿಂದ ಹೊಡೆಯಿತಾದರೂ, ಅದಕ್ಕೆ ಸಿಕ್ಕಿದ್ದು ಒಂದಿಷ್ಟು ತುಪ್ಪಳ ಮಾತ್ರ. ಚಿರತೆ ಮೋಜ್‌ನನ್ನು ಅಟ್ಟಿಸಿಕೊಂಡು ಹೋಯಿತು. ಬೆಟ್ಟದ ತುದಿಯನ್ನು ಕಾಡುಮೇಕೆ ಚಿರತೆಗಿಂತ ಮೊದಲೇ ತಲುಪಿತು. ಮುಕರ್ತಿ ಬೆಟ್ಟದ ಶಿಖರಗಳಲ್ಲಿ ಕಾಡುಮೇಕೆಗಳು ಓಡಾಡಿದ್ದ ಹಾದಿಗಳಿದ್ದವು. ಮೋಜ್‌ಗೆ ಅವುಗಳ ಪರಿಚಯವಿತ್ತು. ಅತ್ಯಂತ ಸಮೀಪದ ಶಿಖರವನ್ನು ಅದು ತಲುಪಿತ್ತು. ಅದು ಸುರಕ್ಷಿತವೂ ಆಗಿತ್ತು. ಮೋಜ್‌ನನ್ನು ತೀವ್ರವಾಗಿ ಹಿಂಬಾಲಿಸಿದ್ದ ಚಿರತೆ ತಾನು ಅಪಾಯದಲ್ಲಿ ಸಿಕ್ಕಿಹಾಕಿಕೊಂಡಿದ್ದೇನೆ ಎಂದು ತಿಳಿಯುವಷ್ಟರಲ್ಲಿ ಬಹಳ ತಡವಾಗಿಬಿಟ್ಟಿತ್ತು. ತನ್ನ ವೇಗವನ್ನು ನಿಯಂತ್ರಿಸಲಾಗದ ಚಿರತೆ ಕೋಡಿನ ತುದಿಯತ್ತ ವೇಗವಾಗಿ ಧಾವಿಸಿತು. ಒಂದೇ ಒಂದು ಕ್ಷಣ ಬಂಡೆಯೊಂದನ್ನು ಅಪ್ಪಿದ್ದ ಚಿರತೆ ನಂತರ ಕಣ್ಮರೆಯಾಯಿತು. ಮಾರನೆಯ ದಿನ ಬೆಳಗ್ಗೆ ತೋಡರು ಕಲ್ಲು ಬಂಡೆಯೊಂದರ ಮೇಲೆ ಜಜ್ಜಿ ಹೋಗಿದ್ದ ಚಿರತೆಯ ದೇಹವನ್ನು ಕಂಡರು. ರಣಹದ್ದುಗಳು ಆಗಲೇ ಭಾರಿ ಔತಣಕ್ಕಾಗಿ ಅಲ್ಲಿ ಸೇರುತ್ತಿದ್ದವು.

ಮೋಫ್‌ಮಂಡ್‌ನ ತೋಡರು ತಮ್ಮ ನೆರೆಯವರನ್ನು ಕರೆದು ಅಂದು ರಾತ್ರಿ ಹಬ್ಬ ಮಾಡಿದರು. ಹೆಂಗಸರು ಔತಣಕ್ಕೆ ಸಿದ್ಧತೆ ನಡೆಸುತ್ತಿದ್ದಂತೆ, ಗಂಡಸರು ಕುಣಿದರು.

ತೋಡರ ನೃತ್ಯ ಸರಳವಾಗಿದ್ದರೂ, ಅದು ಚೈತನ್ಯ ಮತ್ತು ಹುರುಪಿನಿಂದ ಕೂಡಿದೆ. ಗಂಡಸರು ವೃತ್ತಾಕಾರವಾಗಿ ನಿಂತು ತಮ್ಮ ತಮ್ಮ ಪಕ್ಕದಲ್ಲಿರುವವರ ಸೊಂಟದ ಸುತ್ತ ಕೈಗಳನ್ನು ಬಳಸಿ ಒಟ್ಟಾಗಿ ಒಮ್ಮೆ ಒಂದು ಕಾಲೆತ್ತಿ, ಇನ್ನೊಮ್ಮೆ ಇನ್ನೊಂದು ಕಾಲೆತ್ತಿ ಕುಣಿಯುತ್ತಾರೆ. ಹೀಗೆ ಕುಣಿಯುತ್ತಾ ಸುತ್ತು ಸುತ್ತುತ್ತಾರೆ. ಆಗಾಗ ಓ ಹಾ ಹೊ ಓ ಹಾ ಹೊ ಎಂದು ಸಣ್ಣ ದನಿಯಲ್ಲಿ ಗಡುಸಾಗಿ ಹಾಡುತ್ತಾರೆ. ಪ್ರವಾಹ ಬಂದ ಪೈಕಾರ ನದಿ ಮೊರೆಯುವಂತೆ ಅವರು ಒಟ್ಟಾಗಿ ಹಾಡುತ್ತಿದ್ದ ಹಾಡು ಜೋರಾಗಿ ಮೊಳಗುತ್ತಿತ್ತು. ಅವರು ಕುಣಿಯುತ್ತಿದ್ದಾಗ ಮಂಡ್‌ನ ಕವಿ ತೋಡರ ಹಳೆಯ ಹಾಡೊಂದನ್ನು ಹಾಡಿದ:

"ಬಿದ್ದಿರುವೆ ಪ್ರಪಾತದ ಕೆಳಗೆ ನೀನು
ಗಾಬರಿಗೊಂಡ ಎಮ್ಮೆಯಂತೆ
ಬಿದ್ದಿರುವೆ ಕಲ್ಲುಗುಂಡುಗಳ ಮೇಲೆ ನೀನು"



# VII

ಬೇಟೆಯಾಡುವ ಪ್ರಾಣಿಗಳಲ್ಲೆಲ್ಲಾ ಕಾಡುನಾಯಿಗಳು ಅತ್ಯಂತ ಹೆದರಿಕೆಯನ್ನು ಹುಟ್ಟಿಸುವ ಪ್ರಾಣಿಗಳು. ಅವು ಗುಂಪುಗುಂಪಾಗಿ ಬೇಟೆಯಾಡುತ್ತವೆಯಾದ್ದರಿಂದ ಅವುಗಳಿಂದ ತಪ್ಪಿಸಿಕೊಳ್ಳುವುದು ಸುಲಭವಲ್ಲ. ಅವುಗಳಿಗೆ ಪ್ರಚಂಡ ಧೈರ್ಯ, ಹೆದರಿಕೆ ಎನ್ನುವುದೇ ಇಲ್ಲ. ಅಪ್ರತಿಮ ಬೇಟೆಗಾರನಾದ ಹುಲಿಯೂ ಸಹ ಈ ನಾಯಿಗಳಿಗೆ ಅಡ್ಡ ಬರುವುದಿಲ್ಲ. ಅವು ಹಳ್ಳಿಗಳ ಸಾಮಾನ್ಯ ನಾಯಿಗಳಂತೆ ಕಾಣುತ್ತವೆ. ಆದರೆ ಅವುಗಳ ಕಿವಿಗಳು ಗುಂಡಗಿದ್ದು, ನೇರವಾಗಿ ನಿಮಿರಿರುತ್ತವೆಯಲ್ಲದೆ ಇಟ್ಟಿಗೆಯ ಕೆಂಪು ಬಣ್ಣದ್ದಾಗಿರುತ್ತವೆ. ಹಳ್ಳಿಯ ನಾಯಿಯನ್ನೂ, ಕಾಡುನಾಯಿಯನ್ನೂ ಪ್ರತ್ಯೇಕಿಸುವ ಮುಖ್ಯ ಲಕ್ಷಣವೆಂದರೆ ಕಾಡುನಾಯಿಯ ಹೊದರಿನ ಕಪ್ಪು ಬಾಲ.

ಕಾಡು ನಾಯಿಗಳು ಮುಖ್ಯವಾಗಿ ಬೆಟ್ಟದ ಕೆಳಗಿನ ಪ್ರದೇಶದಲ್ಲಿ ವಾಸಿಸುತ್ತವೆ. ಅಲ್ಲೇ ಸಂತಾನ ಬೆಳೆಸುತ್ತವೆ. ಆಗಾಗ ಅವು ನೀಲಗಿರಿ ಪ್ರಸ್ಥಭೂಮಿಯನ್ನು ಹತ್ತಿ, ಅದರ ಉದ್ದಕ್ಕೂ ಸಂಚರಿಸುತ್ತವೆ. ಹೀಗೆ ಸಂಚರಿಸುವಾಗ ಅವು ಬೇಟೆಗೂ ತೊಡಗುತ್ತವೆ. ಅವಕಾಶ ಸಿಕ್ಕರೆ ತೋಡರ ಎಮ್ಮೆಕರುಗಳನ್ನೂ ಹಿಡಿಯುತ್ತವೆ.

ಕಿವಿಹರುಕ ಇಂತಹ ಕಾಡುನಾಯಿಗಳ ಗುಂಪೊಂದರ ನಾಯಕ. ಈ ಗುಂಪು ಪ್ರತಿ ವರ್ಷ ಪ್ರಸ್ಥಭೂಮಿಯಲ್ಲಿ ಕೆಲವು ತಿಂಗಳುಗಳನ್ನು ಕಳೆಯುತ್ತಿತ್ತು. ಒಂದು ಕಡವೆ(ಗಂಡು ಸಾರಂಗ)ಯನ್ನು ಮುಖಾಮುಖಿಯಾಗಿ ಹಿಡಿಯಲು ಹೋದಾಗ ಅದರ ಒಂದು ಕಿವಿ ಹರಿದಿದ್ದರಿಂದ ಕಿವಿಹರುಕ ಎಂಬ ಹೆಸರು ಬಂತು. ಕಡವೆ ತನ್ನ ಚೂಪಾದ ಕೊಂಬುಗಳಿಂದ ಕಿವಿಹರುಕದ ತಲೆಯನ್ನು ತಿವಿದಾಗ, ಆ ತಿವಿತಕ್ಕೆ ತಲೆ ಸಿಗದೆ ಅದರ ಬಲಗಿವಿ ಸಿಕ್ಕಿತ್ತು. ಅದೃಷ್ಟವಶಾತ್ ಅದು ಪ್ರಾಣಾಪಾಯದಿಂದ ಪಾರಾಗಿತ್ತು ಹಾಗೂ ಈ ಅನುಭವದಿಂದಾಗಿ ಅದು ಕುಯುಕ್ತಿಯನ್ನೂ, ಧೈರ್ಯವನ್ನೂ ಬೆಳೆಸಿಕೊಂಡಿತು. ಕಿವಿಹರುಕ ಒಳ್ಳೆಯ ನಾಯಕನಾಗಿತ್ತು. ಅದರ ನಾಯಕತ್ವದಲ್ಲಿ ಎರಡು ಮರಿಗಳೂ ಇದ್ದ ಒಂಭತ್ತು ನಾಯಿಗಳ ಗುಂಪು ನಿಶ್ಚಿಂತೆಯಿಂದ ಇತ್ತು.

ಬೆಟ್ಟದ ತುದಿಯಿಂದ ತುಸು ದೂರದಲ್ಲಿ ಗುಡ್ಡವೊಂದನ್ನು ನಾಯಿಗಳ ಗುಂಪು ಹತ್ತಿದಾಗ ಕಿವಿಹರುಕ ಎಲ್ಲರಿಗಿಂತ ಮುಂದಿತ್ತು. ಬೆಳಿಗ್ಗೆಯ ಸೂರ್ಯನ ಬೆಳಕಿನಲ್ಲಿ ಇಬ್ಬನಿಯಿಂದ ತೋಯ್ದಿದ್ದ ನಾಯಿಯ ಚರ್ಮ ಹೊಳೆಯುತ್ತಿತ್ತು. ಕಿವಿಹರುಕ ತನ್ನ ಕೆಳಗಿದ್ದ ಪ್ರದೇಶವನ್ನು ನೋಡುತ್ತಾ ನಿಶ್ಚಲವಾಗಿ ನಿಂತಿತ್ತು. ಚಿನ್ನದಲ್ಲಿ ಕಡೆದ ಪ್ರತಿಮೆಯಂತೆ ಅದು ಕಾಣುತ್ತಿತ್ತು. ಆದರೆ ಅದರ ಉದ್ದೇಶ ಚಿನ್ನದಂತಹುದಾಗಿರಲಿಲ್ಲ. ಅದು ಬಹಳ ದೂರದಿಂದ ಗುಂಪನ್ನು ಕರೆತಂದಿತ್ತು ಅಲ್ಲದೆ ಅವುಗಳು ಹಸಿದಿದ್ದವು. ತಿನ್ನಲು ಯಾವುದಾದರೂ ಪ್ರಾಣಿ ಕಾಣಸುತ್ತದೇನೋ ಎಂದು ಕಿವಿಹರುಕ ನೋಡುತ್ತಿತ್ತು. ಕಾಡುನಾಯಿಗಳ ಮೂಗು ಬಹಳ ಚುರುಕು. ಆದರೆ ಇದು ವಿಶಾಲವಾದ ಪ್ರದೇಶವಾಗಿತ್ತು. ಕಿವಿಹರುಕ ತನ್ನ ಮೂಗಷ್ಟೇ ಅಲ್ಲ, ಕಣ್ಣುಗಳಿಂದಲೂ ಹುಡುಕುತ್ತಿತ್ತು. ಹುಡುಕುವ ಕೆಲಸವನ್ನು ನಾಯಕನಿಗೆ ಬಿಟ್ಟ ಗುಂಪಿನ ಇತರ ನಾಯಿಗಳು ಗುಡ್ಡದಲ್ಲಿ ಚದುರಿ, ವಿಶ್ರಾಂತಿ ಪಡೆಯುತ್ತ ಸೂಚನೆಗಾಗಿ ಕಾಯುತ್ತಿದ್ದವು.



ದೂರದಲ್ಲಿ ಎರಡು ಎತ್ತರದ ಗುಡ್ಡಗಳಾಚೆ ಕಿವಿಹರುಕ ಕಾಡುಮೇಕೆಗಳ ಹಿಂಡೊಂದನ್ನು ಗಮನಿಸಿತು. ಹಿಂಡಿನಲ್ಲಿ ಹನ್ನೊಂದು ಮೇಕೆಗಳಿದ್ದು ಅವು ಎಳೆಯ ಹುಲ್ಲನ್ನು ಆಸಕ್ತಿಯಿಂದ ಮೇಯುತ್ತಿದ್ದವು.

ನಾಯಿಗಳ ಗುಂಪಿನಲ್ಲಿ ಕಿವಿಹರುಕ ಪ್ರಮುಖ ಗಂಡಾಗಿತ್ತು. ನಾಯಕತ್ವ ವಹಿಸುವುದಕ್ಕೆ ಅದೊಂದೇ ಅರ್ಹತೆಯಾಗಿರಲಿಲ್ಲ. ಹೆಣ್ಣು ಕಾಡುನಾಯಿಗಳೂ ಸಹ ಗುಂಪಿನ ನಾಯಕತ್ವ ವಹಿಸಬಲ್ಲವು. ಕಿವಿಹರುಕ ಜಾಣ ಬೇಟೆಗಾರನಾಗಿತ್ತು. ಅದರ ಬೇಟೆಯ ತಂತ್ರವು ಬೇಟೆಗೆ ಆರಿಸಿದ ಪ್ರದೇಶ ಮತ್ತು ಬೇಟೆಗೆ ಗುರಿಯಾಗುವ ಪ್ರಾಣಿಗಳ ದೃಷ್ಟಿಯಿಂದ ಸೂಕ್ತವಾಗಿತ್ತು. ಕಾಡುಮೇಕೆಗಳು ಮೇಯುತ್ತಿದ್ದ ಎಳೆಹುಲ್ಲಿನ ಭೂಮಿಯ ಭಾಗ ಬೆಟ್ಟಗಳಿಂದಾಚೆಗೆ ಬೆರಳಿನಂತೆ ಚಾಚಿತ್ತು. ಅವು ಮೇಯುತ್ತಾ ಬೆಟ್ಟಗಳಿಂದ ದೂರ ಸರಿಯುತ್ತಿದ್ದವು. ಕಿವಿಹರುಕ ಕಾಯುವುದೇ ಸರಿ ಎಂದು ನಿರ್ಧರಿಸಿತು. ಅದರ ತಾಳ್ಮೆಗೆ ಪ್ರತಿಫಲ ದೊರಕಿತು. ಕಾಡುಮೇಕೆಗಳು ಬೆಟ್ಟಗಳಿಂದ ದೂರ ಸರಿದವು.

ಕಿವಿಹರುಕ ಮೇಲೆದ್ದು ಬೇಟೆಯ ಪ್ರಾರಂಭದ ಸಂಕೇತವನ್ನು ನೀಡಿತು. ನಾಯಿಗಳ ಗುಂಪಿನಲ್ಲಿ ಅತ್ಯಂತ ವೇಗವಾಗಿ ಓಡುವ ಸಾಮರ್ಥ್ಯದ ಎರಡು ನಾಯಿಗಳು ಮುಂದಾಗಿ ಬೆಟ್ಟಗಳ ಹಾದಿಯತ್ತ ಓಡಿದವು. ಕಾಡುಮೇಕೆಗಳು ಬೆಟ್ಟಗಳಿಗೆ ಹಿಂದಿರುಗದಂತೆ ಮಾಡುವುದೇ ಅವುಗಳ ಉದ್ದೇಶವಾಗಿತ್ತು. ಉಳಿದ ನಾಯಿಗಳೊಂದಿಗೆ ಕಿವಿಹರುಕ ಕಾಡುಮೇಕೆಗಳತ್ತ ಧಾವಿಸಿತು. ನಾಯಿಗಳು ಸಾವಕಾಶವಾಗಿ ಹೋಗುತ್ತಿದ್ದಂತೆ ಕಾಣಿಸುತ್ತಿತ್ತಾದರೂ ನಿಜಕ್ಕೂ ಅವುಗಳ ಹಾರುಗಾಲಿನ ಓಟ ಕ್ಷಿಪ್ರವಾಗಿತ್ತು.

ಒಂದು ಕೊಂಬಿನ ತುದಿ ಸ್ವಲ್ಪ ಮುರಿದಿದ್ದ ವಯಸ್ಸಾದ ಹೆಣ್ಣು ಕಾಡುಮೇಕೆ ಮೇಕೆಗಳ ಮಂದೆಯ ಹಿರಿತನ ಹೊಂದಿತ್ತು. ಕೊಂಬುಮುರುಕಗೆ ನಾಯಿಗಳು ಕಾಣುವುದಕ್ಕೆ ಮೊದಲು ಅವುಗಳ ಶಬ್ದ ಕೇಳಿಸಿತು. ಕಾಡುನಾಯಿಗಳ ಗುಂಪಿನಲ್ಲಿ ಆಗ ತಾನೇ ಪ್ರಾಯಕ್ಕೆ ಬರುತ್ತಿದ್ದ ಎರಡು ನಾಯಿಗಳು ತಮ್ಮ ಉದ್ರೇಕದಿಂದಾಗಿ ಕುಂಯ್‌ಗುಟ್ಟಿದ ಶಬ್ದ ಅದಕ್ಕೆ ಮೊದಲು ಕೇಳಿಸಿತ್ತು. ಕಾಡುನಾಯಿಗಳ ಬೇಟೆಯ ಅನುಭವ ಅದಕ್ಕಿತ್ತು. ಅದರಿಂದಾಗಿ ಅದು ಗಾಬರಿಗೊಳ್ಳಲಿಲ್ಲ, ತನ್ನ ಮುಂಗಾಲುಗಳನ್ನು ನೆಲಕ್ಕೆ ಬಡಿಯುವ ಮೂಲಕ ಮಂದೆಗೆ ಎಚ್ಚರಿಕೆ ನೀಡಿ ಅದು ಬೆಟ್ಟದ ತುದಿಗಳ ಕಡೆ ಓಡಿತು. ಮಂದೆಯ ಉಳಿದ ಮೇಕೆಗಳು ಅದನ್ನು ಹಿಂಬಾಲಿಸಿದವು. ಕಾಡುನಾಯಿಗಳು ಅವುಗಳನ್ನು ಅಟ್ಟಿಸಿಕೊಂಡು ಓಡಿದವು. ಅದು ದೀರ್ಘ ಓಟದ ಸ್ಪರ್ಧೆಯಾಗಿತ್ತು ಹಾಗೂ ನಾಯಿಗಳು ಕ್ರಮೇಣ ಮೇಕೆಗಳನ್ನು ಸಮೀಪಿಸುತ್ತಿದ್ದವು. ಮೇಕೆಗಳು ವಿಶ್ವಾಸದಿಂದ ಓಡಿದವು. ನಾಯಿಗಳು ತಮ್ಮ ಮೇಲೆ ಎರಗುವಷ್ಟು ಸಮೀಪಕ್ಕೆ ಬರುವ ಮೊದಲೇ ಬೆಟ್ಟದ ತುದಿಗಳನ್ನು ಮುಟ್ಟುವ ಆಸೆ ಅವುಗಳಿಗಿತ್ತು.

ಬೆಟ್ಟದ ತುದಿಗಳಿಗೆ ಹೋಗುವ ಕಿರುದಾರಿಗಳಲ್ಲಿ ಕಾಡುಮೇಕೆಗಳು ಮಾತ್ರ ಸಂಚರಿಸಬಹುದಾದರೂ, ಅಂತಹ ದಾರಿಗಳು ಕೆಲವೇ ಇದ್ದವು. ಆ ಕಿರುದಾರಿಗಳನ್ನು ತಲುಪುವ ಹಾದಿಗಳನ್ನು ಗುರುತಿಸುವುದು ಸುಲಭ. ಕೊಂಬುಮುರುಕ ಈ ಹಾದಿಗಳ ಪೈಕಿ ಒಂದರತ್ತ ಧಾವಿಸಿತು. ಹಾದಿಯಲ್ಲಿ ಯಾವ ಅಡಚಣೆಯೂ

ಇದ್ದಂತೆ ಕಾಣಲಿಲ್ಲವಾದರೂ, ಬಂಡೆಯ ಹಿಂದಿನಿಂದ ನಾಯಿಯೊಂದು ಹಾರಿ ಬಂತು. ಕೊಂಬುಮುರುಕ ಎಡಕ್ಕೆ ತಿರುಗಿ ಬೆಟ್ಟಗಳಿಗೆ ಸಮಾನಂತರವಾದ ದಾರಿಯಲ್ಲಿ ಮುಂದಿನ ಕಿರುಹಾದಿಯತ್ತ ಓಡಿತು. ಈ ಕಿರುಹಾದಿ ಕಮರಿಯ ಕೆಳಗಡೆ ಇತ್ತು ಹಾಗೂ ಅದು ಕಣ್ಣಿಗೆ ಕಾಣುತ್ತಿರಲಿಲ್ಲ. ಮೇಕೆಗಳು ತಮ್ಮ ಓಟದ ವೇಗವನ್ನು ಹೆಚ್ಚಿಸಿದವು. ಆದರೆ ನಾಯಿಗಳು ತಮ್ಮ ವೇಗವನ್ನು ಹೆಚ್ಚಿಸಲು ಅಷ್ಟೇನೂ ಶ್ರಮಿಸಲಿಲ್ಲ. ಮೇಕೆಗಳು ಕಮರಿಯನ್ನು ಮುಟ್ಟಿದವಾದರೂ ಅಲ್ಲೊಂದು ನಾಯಿ ಅವುಗಳಿಗಾಗಿ ಕಾಯುತ್ತಾ ಕುಳಿತಿತ್ತು. ಬೆಟ್ಟದ ತುದಿಗಳತ್ತ ಹೋಗುವ ಈ ಎರಡನೆಯ ಹಾದಿಯು ಮುಕ್ತವಾಗಿಲ್ಲ ಎಂಬುದು ಕೊಂಬುಮುರುಕಗೆ ತಿಳಿದಾಗ ಸ್ವಲ್ಪ ಗೊಂದಲ ಉಂಟಾಯಿತು. ಆದರ ಮುಂದಿನ ಕಿರುಹಾದಿ ತುಂಬಾ ದೂರದಲ್ಲಿತ್ತು. ಆದರೆ ಈ ಗೊಂದಲ ಕ್ಷಣಕಾಲ ಮಾತ್ರ ಇತ್ತು. ತಾನು ಹಿಂದೆ ಆಶ್ರಯ ಪಡೆದಿದ್ದ ಮುಕರ್ತಿ ಬೆಟ್ಟದ ಶಿಖರದಲ್ಲಿ ಭದ್ರತೆ ಪಡೆಯಲು ಕೊಂಬುಮುರಕ ನಿರ್ಧರಿಸಿತು.

ಹಿಂಡಿನಲ್ಲಿ ಒಂದು ಪ್ರಾಯದ ಗಂಡು ಮೇಕೆ ಇತ್ತು. ಅದು ಕೊಂಬುಮುರುಕನ ನಾಯಕತ್ವವನ್ನು ಒಪ್ಪಿರಲಿಲ್ಲ ಹಾಗೂ ಅದರ ಅಧಿಕಾರವನ್ನು ಆಗಾಗ ಪ್ರಶ್ನಿಸುತ್ತಿತ್ತು. ಮುಕರ್ತಿಯತ್ತ ಓಡಲು ಪ್ರಯತ್ನಿಸಿ ಕೊಂಬುಮುರುಕ ತಪ್ಪು ಮಾಡಿದೆ ಎಂದು ಅದು ಭಾವಿಸಿತು. ಆದ್ದರಿಂದ ಅದು ಹಿಂಡಿನಿಂದ ಪ್ರತ್ಯೇಕವಾಗಲು ನಿರ್ಧರಿಸಿ ನೇರವಾಗಿ ಬೆಟ್ಟಗಳ ತುದಿಯತ್ತ ಓಡಿತು. ಕಿವಿಹರುಕ ಇಂತಹ ಒಂದು ಅವಕಾಶಕ್ಕಾಗಿ ಕಾಯುತ್ತಿತ್ತು. ಬೇರೆಯಾಗಿ ಓಡಿದ ಮೇಕೆಯನ್ನು ನಾಯಿಗಳು ಶೀಘ್ರದಲ್ಲೇ ತಲುಪಿ ಎಲ್ಲ ಕಡೆಯಿಂದಲೂ ಅದರ ಮೇಲೆ ಬಿದ್ದವು. ನರಮಂಡಲಕ್ಕೆ ಆದ ಆಘಾತ ಹಾಗೂ ರಕ್ತಸ್ರಾವದಿಂದ ಮೇಕೆ ಸಾಯುವವರೆಗೆ ನಾಯಿಗಳು ಅದರ ದೇಹದಿಂದ ಮಾಂಸದ ದೊಡ್ಡ ಭಾಗಗಳನ್ನು ಕಿತ್ತವು.

ಕಾಡುನಾಯಿಗಳು ವೇಗವಾಗಿ ಹಾಗೂ ಆತುರಾತುರವಾಗಿ ತಿನ್ನುವ ಪ್ರಾಣಿಗಳು. ಸ್ವಲ್ಪ ಹೊತ್ತಿನಲ್ಲೇ ಕೊಂಬುಗಳು, ಗೊರಸುಗಳು ಮತ್ತು ಕೆಲವು ಮೂಳೆಗಳ ಹೊರತಾಗಿ ಕಾಡುಮೇಕೆಯದು ಏನೂ ಉಳಿಯಲಿಲ್ಲ. ಆದರೆ ನಾಯಿಗಳ ಹಸಿವು, ಅದರಲ್ಲೂ ಮೇಕೆಯನ್ನು ಕೊನೆಯಲ್ಲಿ ತಲುಪಿದ ನಾಯಿಗಳ ಹಸಿವು, ತೀರಿರಲಿಲ್ಲ. ಕಿವಿಹರುಕ ಪುನಃ ತನ್ನ ಗುಂಪಿನೊಡನೆ ಮೇಕೆಗಳ ಹಿಂಡು ಓಡುತ್ತಿದ್ದ ದಾರಿಯನ್ನು ಹಿಡಿಯಿತು.

ಕೊಂಬುಮುರುಕ ನಾಯಿಗಳಿಗಿಂತ ಸಾಕಷ್ಟು ಮುಂದಿತ್ತು. ಆದರೆ ಮೆದುವಾದ ಭೂಮಿಯ ಮೇಲೆ ಓಡುವುದಾಗಲೀ ಹೆಚ್ಚು ದೂರ ಕ್ರಮಿಸುವುದಾಗಲೀ ಕಾಡುಮೇಕೆಗಳಿಂದ ಆಗದು. ಅದೂ ಅಲ್ಲದೆ ಹಿಂಡಿನಲ್ಲಿ ಕೆಲವು ಎಳೆಯ ಮೇಕೆಗಳೂ ಇದ್ದವು. ಕಾಡುನಾಯಿಗಳು ಬೇಟೆಯನ್ನು ಪುನಃ ಪ್ರಾರಂಭಿಸುತ್ತವೆ ಎಂದು ಮೇಕೆಗಳು ನಿರೀಕ್ಷಿಸಿಯೂ ಇರಲಿಲ್ಲ. ಆದ್ದರಿಂದ ಅವು ಮುಕರ್ತಿ ಬೆಟ್ಟದ ಕಡೆ ಸಾವಕಾಶವಾಗಿ ಹೋಗುತ್ತಿದ್ದವು. ಕಾಡುನಾಯಿಗಳು ಪುನಃ ತಮ್ಮನ್ನು ಅಟ್ಟಿ ಬರುತ್ತಿವೆ ಎಂದು ಅವುಗಳಿಗೆ ತಿಳಿದಾಗ ಓಡುವುದು ಜೀವ ಉಳಿಸಿಕೊಳ್ಳುವ ಸ್ಪರ್ಧೆಯಾಗಿಬಿಟ್ಟಿತು.

ಮುಕರ್ತಿ ಬೆಟ್ಟದ ಮೇಲೆ ನಿಂತಿದ್ದ ಎತ್ತರದ ಸ್ಥಳದಿಂದ ಮೋಜ್ ಈ ಬೇಟೆಯನ್ನು ಗಮನಿಸಿತು.

ಗುಂಪಿಗೆ ಸೂಚನೆ ಕೊಡಲು ಆಗಾಗ 'ಯಾಪ್, ಯಾಪ್' ಎಂದು ಕೂಗುವುದನ್ನು ಬಿಟ್ಟರೆ ನಾಯಿಗಳು ಮೌನವಾಗಿ ಸರದಿಯಲ್ಲಿ ಓಡುವ ತಂಡದಂತೆ ಓಡುತ್ತಿದ್ದವು. ಮುಂದೆ ಓಡುತ್ತಿದ್ದ ನಾಯಿಗಳಿಗೆ ಆಯಾಸವಾದರೆ ಅವುಗಳ ಸ್ಥಾನದಲ್ಲಿ ಬೇರೆ ನಾಯಿಗಳು ಓಡುತ್ತಿದ್ದವು. ಇದರಿಂದಾಗಿ ಶಿಕಾರಿಗಳ ಮೇಲೆ ವಿಪರೀತ ಒತ್ತಡ ಉಂಟಾಯಿತು.

ಮೋಜ್ ನೋಡುತ್ತಿದ್ದಂತೆ, ನಾಯಿಗಳು ಒಂದೇ ಸಮನೆ ಓಡುತ್ತಾ ಮೇಕೆಗಳನ್ನು ಸಮೀಪಿಸುತ್ತಿದ್ದವು. ಆದರೆ ಆ ವೇಳೆಗೆ ಕಾಡುಮೇಕೆಗಳು ಪರ್ವತದ ತಳವನ್ನು ಮುಟ್ಟಿದ್ದವು. ಪರ್ವತವನ್ನು ಹತ್ತುವುದಷ್ಟೇ ಉಳಿದಿತ್ತು. ಮೇಕೆಯ ಮರಿಗಳಲ್ಲಿ ತುಂಬಾ ಎಳೆಯದಾಗಿದ್ದ ಮರಿಗೆ ಈ ವೇಳೆಗೆ ಬಹಳ ಸುಸ್ತಾಗಿ ಅದು ತಡವರಿಸುತ್ತಿತ್ತು. ಮುಂದೆ ಇದ್ದ ನಾಯಿಗಳು ಅದು ಓಡುತ್ತಿದ್ದಂತೆ ಅದರ ಮೈಯನ್ನು ಕಚ್ಚಿ ಕೀಳುತ್ತಿದ್ದವು. ಕೊನೆಗೆ ನಾಯಿಗಳು ಅದರ ಮೇಲೆ ಒಟ್ಟಿಗೆ ಬಿದ್ದಾಗ ಅದರಿಂದ ಹೊರಟ ಕೂಗು ಹೃದಯವಿದ್ರಾವಕ ವಾಗಿತ್ತು. ಬೇಟೆಯಲ್ಲಿ ಉಂಟಾದ ಈ ಅಲ್ಪ ಸಮಯಾವಕಾಶದಿಂದಾಗಿ ಉಳಿದ ಮೇಕೆಗಳು ದೂರಕ್ಕೆ ಓಡುವುದು ಸಾಧ್ಯವಾಯಿತು. ಪೂರ್ತಿ ಗಾಬರಿಗೊಂಡಿದ್ದ ಮೋಜ್ ಮೊದಲು ಬೆಟ್ಟದ ತುದಿಯನ್ನು ತಲುಪಿತು. ಅದರ ಹಿಂದೆ ಕೊಂಬುಮುರುಕ ಮತ್ತು ಇತರ ಮೇಕೆಗಳು ರಕ್ಷಣೆಯ ಸ್ಥಾನವನ್ನು ತಲುಪಿದವು.

ಈ ಬೇಟೆಯ ಪರಿಣಾಮದಿಂದ ಮೇಕೆಗಳ ಹಿಂಡು ಬೇಗ ಚೇತರಿಸಿಕೊಂಡು ಎಂದಿನ ಜೀವನದಲ್ಲಿ ನಿರತವಾಯಿತು. ಹಿಂಡಿನಲ್ಲಿ ಮೋಜ್ ವಯಸ್ಸಿನ ಎರಡು ತರುಣ ಗಂಡು ಮೇಕೆಗಳಿದ್ದವು. ಸಹಜವಾಗಿ ಈ ಮೂರು ಮೇಕೆಗಳು ಆಗಾಗ ಕಾದಾಡುತ್ತಿದ್ದವು. ಹೋರಾಟ ಮಾಡಿ ಅಭ್ಯಾಸ ಇಲ್ಲದಿದ್ದ ಮೋಜ್ ಪ್ರಾರಂಭದಲ್ಲಿ ಈ ಸೆಣಸಾಟಗಳಲ್ಲಿ ಬಹಳ ಪೆಟ್ಟು ತಿನ್ನುತ್ತಿತ್ತು. ಆದರೆ ದಿನಗಳು ಕಳೆದಂತೆ ತನ್ನನ್ನು ತಾನು ರಕ್ಷಿಸಿಕೊಳ್ಳುವುದನ್ನು ಅದು ಕಲಿಯಿತು. ಸೋಲುವ ಸ್ಥಿತಿ ಮುಟ್ಟುತ್ತಿದ್ದಂತೆ ಶರಣಾದೆ, ಇನ್ನು ಹೋರಾಟ ಬೇಡ ಎಂಬ ಸೂಚನೆಯನ್ನು ಕೊಡುತ್ತಿತ್ತು. ಅನಗತ್ಯವಾದ ಹಾಗೂ ದೀರ್ಘ ಹೋರಾಟಗಳನ್ನು ತಪ್ಪಿಸಲು ವನ್ಯ ಮೃಗಗಳು, ಸೋತಾಗ ಶರಣಾಗುವ ಹಾಗೂ ಗೆದ್ದಾಗ ಪ್ರಾಬಲ್ಯವನ್ನು ತೋರಿಸುವ ಸನ್ನೆಗಳನ್ನು ಮಾಡುತ್ತವೆ. ಮೋಜ್ ಇವುಗಳನ್ನು ಕಲಿಯಬೇಕಾಯಿತು. ಒಳ್ಳೆಯ ಆಶ್ರಯದಲ್ಲಿ ಚೆನ್ನಾಗಿ ತಿಂದು ಬೆಳೆದಿದ್ದ ಮೋಜ್ ಕಾಲಕ್ರಮೇಣ ಹಿಂಡಿನ ನಾಯಕ ಮೇಕೆಗಳ ಪೈಕಿ ಒಂದಾಯಿತು.

ಸಂತಾನೋತ್ಪತ್ತಿಯ ಕಾಲ ಸಮೀಪಿಸುತ್ತಿದ್ದಂತೆ ಕೊಂಬುಮುರುಕ ಚಡಪಡಿಸತೊಡಗಿತು. ಪ್ರತಿ ದಿನ ಅದು ಮುಕರ್ತಿ ಬೆಟ್ಟವನ್ನು ಹತ್ತಿ, ಕಾಡುನಾಯಿಗಳು ಸುತ್ತಾಡುತ್ತಿಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳಲು ಸುತ್ತಲಿನ ಪ್ರದೇಶವನ್ನು ಗಂಟೆಗಟ್ಟಳೆ ಗಮನಿಸುತ್ತಿತ್ತು. ಏನೂ ಅಪಾಯವಿಲ್ಲ ಎಂದು ತನಗೆ ಖಚಿತವಾದ ನಂತರ ಅದು ಪರ್ವತಗಳ ಮುಖ್ಯ ಮಾರ್ಗದ ಕಡೆ ಹಿಂಡಿನೊಂದಿಗೆ ಸಾಗಿತು. ಮೋಜ್‌ನ ಜೀವನದಲ್ಲಿ ಇದು ಪ್ರಮುಖ ಸಮಯವಾಗಿತ್ತು. ಸಮೀಪದಲ್ಲಿದ್ದ ಹಾಗೂ ತನ್ನನ್ನು ಅಕ್ಕರೆಯಿಂದ ಕಾಣುತ್ತಿದ್ದ ತೋಡರ

ಜೊತೆಗೆ ಬೆಟ್ಟದ ಮೇಲೆ ಇರುವುದೇ ಅಥವಾ ಕಾಡುಮೇಕೆಗಳಿರುತ್ತಿದ್ದ ವಿಶಾಲ ಪ್ರದೇಶಕ್ಕೆ ಹೋಗುವುದೇ ಎಂಬುದು ಅದರ ಮುಂದಿದ್ದ ಪ್ರಶ್ನೆಯಾಗಿತ್ತು. ಸಾಹಸದ ಕರೆಗೆ ಅದು ಓಗೊಟ್ಟಿತು.

ಕೊಂಬುಮುರುಕನ ಹಿಂಡು ಇತರ ಹಿಂಡುಗಳೊಂದಿಗೆ ಸೇರಿತು. ಕೆಲವೊಮ್ಮೆ ಎರಡು ಅಥವಾ ಮೂರು ಹಿಂಡುಗಳು ಒಟ್ಟಿಗೆ ಸೇರುತ್ತಿದ್ದವು. ಮೇಯುವುದಕ್ಕೆ ಪ್ರಶಸ್ತವಾದ ಸ್ಥಳ ಕೆಲವೇ ಪ್ರದೇಶಗಳಿಗೆ ಸೀಮಿತವಾಗಿದ್ದರೆ, ಅಲ್ಲಿ ಅನೇಕ ಹಿಂಡುಗಳು ಒಟ್ಟಾಗುತ್ತಿದ್ದವು.

ಮೋಜ್‌ಗೆ ವಯಸ್ಸಾಗುತ್ತಿದ್ದಂತೆ, ಅದರ ಬಣ್ಣ ಬದಲಾಗತೊಡಗಿತು. ಅದರ ಮೈ ಚರ್ಮ ಬೂದು ಬಣ್ಣದಿಂದ ಕಂದು ಬಣ್ಣಕ್ಕೆ ತಿರುಗಿ ನಂತರ ಚಾಕೊಲೇಟ್ ಬಣ್ಣವಾಯಿತು. ಅದು ಕಟ್ಟುಮಸ್ತಾಗಿ ಬೆಳೆಯಿತು. ಪ್ರೌಢಾವಸ್ಥೆಯನ್ನು ದಾಟಿ ತುಂಬು ತಾರುಣ್ಯವನ್ನು ತಲುಪುವ ಈ ಹಂತದಲ್ಲಿ ಗಂಡು ಮೇಕೆಗಳಲ್ಲಿ ಮೇಲೆ ಬಿದ್ದು ಜಗಳವಾಡುವ ಪ್ರವೃತ್ತಿ ಇರುತ್ತದೆ.

ತುಂಬು ತಾರುಣ್ಯದ ಗಂಡು ಮೇಕೆಗಳು ಯಾವುದೇ ಹಿಂಡಿನಲ್ಲಿ ಶಾಶ್ವತವಾಗಿ ಇರುವುದಿಲ್ಲ. ಸಂತಾನೋತ್ಪತ್ತಿಯ ಕಾಲದಲ್ಲಿ ಅವು ಹಿಂಡುಗಳೊಂದಿಗೆ ಸೇರುತ್ತವೆ. ನಂತರ ಹಿಂಡುಗಳನ್ನು ಬಿಟ್ಟು ಹೋಗುತ್ತವೆ. ಕೆಲವು ಪ್ರಾಣಿಗಳಿಗೆ ನಿರ್ದಿಷ್ಟವಾದ ಸಂತಾನೋತ್ಪತ್ತಿಯ ಕಾಲ ಇರುತ್ತದೆ. ಆದರೆ ನೀಲಗಿರಿಯ ಕಾಡುಮೇಕೆಗಳು ವರ್ಷದ ಹೆಚ್ಚಿನ ಸಮಯದಲ್ಲಿ ಸಂತಾನೋತ್ಪತ್ತಿ ಮಾಡುತ್ತವೆ. ಅವಕ್ಕೆ ನೈಋತ್ಯ ಮುಂಗಾರಿನ ಕಾಲ ಅತ್ಯಂತ ಹೆಚ್ಚಿನ ಸಂತಾನೋತ್ಪತ್ತಿಯ ಸಮಯ.

ಕೊಂಬುಮುರುಕನ ಹಿಂಡು ಹಿಗ್ಗಿ ಇಪ್ಪತ್ತರ ಸಂಖ್ಯೆ ಮುಟ್ಟಿತು. ಇದರಲ್ಲಿ ಹೆಣ್ಣು ಮೇಕೆಗಳು, ಮರಿಗಳು ಮತ್ತು ಪ್ರಾಯಕ್ಕೆ ಬರದ ಮೇಕೆಗಳು ಸೇರಿದ್ದವು. ಒಂದು ಉತ್ತಮ ಗಂಡು ಮೇಕೆ ಹಿಂಡನ್ನು ಸೇರಿತು. ಈ ಮೇಕೆ ಎರಡು ಪ್ರಧಾನ ಲಕ್ಷಣಗಳನ್ನು ಹೊಂದಿತ್ತು – ಅದರ ಮುಖದ ಮೇಲೆ ಅಡ್ಡವಾಗಿ ಒಂದು ಗುಂಡಿನಿಂದ ಆಗಿದ್ದ ದೊಡ್ಡ ಗಾಯದ ಕಲೆ ಹಾಗೂ ಅದರ ಗಾಢ ಕಂದು ಬಣ್ಣದ ಬೆನ್ನಿನ ಮೇಲೆ ಜೀನಿನ ಗುರುತಿನಂತೆ ಕಾಣುತ್ತಿದ್ದ ತಿಳಿ ಬಣ್ಣದ ಕೂದಲಿನ ಪಟ್ಟಿ. ವಯಸ್ಸಾದಂತೆ ಈ ಜೀನಿನ ಗುರುತುಗಳು ಉಂಟಾಗುತ್ತವೆ ಹಾಗೂ ಈ ಗುರುತು ಹೊಂದಿದ ಗಂಡುಮೇಕೆಗಳಿಗೆ ಜೀನು ಬೆನ್ನಿನವು ಎಂದು ಕರೆಯುತ್ತಾರೆ. ಇವು ಕಾಡುಮೇಕೆಗಳ ಸಂಖ್ಯೆಯ ಸುಮಾರು ಶೇಕಡ ಹತ್ತರಷ್ಟಿರುತ್ತವೆ.

ಗಾಯದಕಲೆ ಮುಖಿ ಮೋಜ್‌ಗಿಂತಲೂ ವಯಸ್ಸಾದ ಹಾಗೂ ಬಲವಾದ ಮೇಕೆಯಾಗಿತ್ತು. ಮೋಜ್ ತನ್ನ ಪ್ರತಿಸ್ಪರ್ಧಿ ಎಂಬುದನ್ನು ಅದು ಗುರುತಿಸಿತು. ತನಗಿಂತ ಕಿರಿಯದಾದ ಮೋಜ್‌ಅನ್ನು ಸ್ವಲ್ಪವೂ ನೆಮ್ಮದಿಯಿಂದಿರಲು ಅದು ಬಿಡಲಿಲ್ಲ. ಮೋಜ್ ಹಿಂಡನ್ನು ಬಿಟ್ಟು ಅಲೆಯಲಾರಂಭಿಸಿತು. ಅದು ಹೀಗೆ ಅಲೆಯತೊಡಗಿದಾಗ ಬಲಶಾಲಿ ಪ್ರತಿಸ್ಪರ್ಧಿಗಳಿಂದಾಗಿ ತನ್ನಂತೆ ಹಿಂಡು ಬಿಟ್ಟ ಇತರ ಗಂಡು ಮೇಕೆಗಳನ್ನು ಅದು ಭೇಟಿ ಮಾಡಿತು. ಅವು ಗಂಡುಮೇಕೆಗಳು ಮಾತ್ರ ಇದ್ದ ತಮ್ಮದೇ ಆದ ಒಂದು ಹಿಂಡಾಗಿ ಗುಡ್ಡಗಳಲ್ಲೆಲ್ಲಾ ಸಂಚರಿಸತೊಡಗಿದವು. ಐದು ಗಂಡುಮೇಕೆಗಳು ಆ ಹಿಂಡಿನಲ್ಲಿದ್ದವು. ಈ ಪೈಕಿ ಬಹಳ

ವಯಸ್ಸಾದ ಜೇನು ಬೆನ್ನಿಗವೊಂದಿತ್ತು. ಅದರ ಬಣ್ಣ ಹೆಚ್ಚುಕಡಿಮೆ ಕಪ್ಪಾಗಿತ್ತು. ಅದರ ಜೇನಿನ ಗುರುತು ಬಹುತೇಕ ಬೆಳ್ಳಗಿದ್ದು ಬಿಸಿಲಿನಲ್ಲಿ ಹೊಳೆಯುತ್ತಿತ್ತು. ಹೀಗಾಗಿ ಅದರ ಇರುವಿಕೆ ಬಹಳ ದೂರಕ್ಕೆ ಗೊತ್ತಾಗುತ್ತಿತ್ತು.

ಒಂದು ದಿನ ಬೆಳಿಗ್ಗೆ ಗುಡ್ಡದ ಬದಿಯೊಂದರಲ್ಲಿ ಈ ಗಂಡುಮೇಕೆಗಳು ಮೇಯುತ್ತಿದ್ದವು. ಆಗ ಮೋಜ್‌ನ ಪಕ್ಕದಲ್ಲಿ ಮೇಯುತ್ತಿದ್ದ ವಯಸ್ಸಾಗಿದ್ದ ಮೇಕೆ ಇದ್ದಕ್ಕಿದ್ದಂತೆ ಕೆಳಗೆ ಬಿದ್ದು ಕಾಲುಗಳನ್ನು ಗಾಳಿಯಲ್ಲಿ ಜೋರಾಗಿ ಅಲ್ಲಾಡಿಸಿತು. ಅದರ ಮೈಯಿಂದ ರಕ್ತ ಚಿಮ್ಮಿತು. ಒಂದು ಕ್ಷಣದ ನಂತರ ಸಿಡಿಲು ಬಡಿದಂತೆ ಕಿವಿಗಡಚಿಕ್ಕುವಂತಹ ಶಬ್ದ ಕೇಳಿಸಿತು. ಮೋಜ್‌ನ ಸಂಗಾತಿಗಳು ದೆವ್ವ ತಮ್ಮನ್ನು ಬೆನ್ನಟ್ಟಿದೆಯೇನೋ ಎಂಬಂತೆ ಅಲ್ಲಿಂದ ಓಡಿದವು. ಇದು ಅಪಾಯ ಎಂದು ತಿಳಿಯಲು ಮೋಜ್‌ಗೆ ಒಂದು ಕ್ಷಣ ಸಾಕಾಯಿತು. ಅದು ಕೂಡಲೇ ಮುಕರ್ತಿ ಬೆಟ್ಟದ ಕಡೆ ಓಡಿತು.



# VIII

ಮೋಜ್‌ನ ಕತ್ತಿನ ಸುತ್ತಲಿನ ಗಾಯದ ಕಲೆ ಇಲ್ಲದಿದ್ದರೆ ಕಾರ್ನೋಜ್ ಅದನ್ನು ಗುರುತಿಸುತ್ತಿರಲಿಲ್ಲ. ಮೋಜ್ ಕಾರ್ನೋಜ್‌ನ ವಾಸನೆಯಿಂದಲೇ ಅವನನ್ನು ಗುರುತಿಸಿತು. ತೋಡರನ್ನು ಕಂಡಕೂಡಲೇ ಹಿಂಡಿನ ಉಳಿದ ಗಂಡುಮೇಕೆಗಳು ಪರ್ವತಗಳ ಸುರಕ್ಷತೆಯ ಸ್ಥಾನಗಳಿಗೆ ಓಡಿ ಹೋದವು. ಮೋಜ್ ಮಾತ್ರ ಕಾರ್ನೋಜ್, ಸಿಮಿಲ್ ಮತ್ತು ಕೂಚ್ ತನ್ನ ಸಮೀಪ ಬರುವುದಕ್ಕೆ ಅವಕಾಶ ಕೊಟ್ಟಿತು. ಗಂಡುಮೇಕೆಗಳು ಇದ್ದ ಮೋಜ್‌ನ ಹಿಂಡು ಕೆಲವು ತಿಂಗಳುಗಳ ಕಾಲ ಮುಕರ್ತಿ ಬೆಟ್ಟದಲ್ಲಿತ್ತು. ಅವುಗಳ ಕಡೆ ಯಾವುದೇ ಬೇಟೆಗಾರ ಬರದಂತೆ ಕಾರ್ನೋಜ್ ಎಚ್ಚರ ವಹಿಸಿದ. ಮೋಜ್ ಮೇಯುತ್ತಾ, ವಿಶ್ರಾಂತಿ ಪಡೆಯುತ್ತಾ ತನ್ನ ಸಂಗಾತಿಗಳೊಂದಿಗೆ ಜಗಳವಾಡುತ್ತಾ ಕಾಲ ಕಳೆಯುತ್ತಿತ್ತು. ಜೀನಿನ ಗುರುತು ಮೋಜ್‌ನ ಬೆನ್ನ ಮೇಲೆ ಮೂಡಲಾರಂಭಿಸಿತು. ಅದರ ಕೊಂಬುಗಳು ಹಿಂದಕ್ಕೆ ದೊಡ್ಡ ಕುಡುಗೋಲಿನಂತೆ ಬಾಗಿದ್ದವು. ಮಳೆಗಾಲದ ಪ್ರಾರಂಭದಲ್ಲಿ ಗಂಡು, ಹೆಣ್ಣು ಎರಡೂ ಇರುವ ಹಿಂಡಿನೊಂದಿಗೆ ಸೇರುವ ತೀವ್ರ ಬಯಕೆ ಮೋಜ್‌ಗೆ ಉಂಟಾಯಿತು. ಮೋಜ್‌ನ ಹಿಂಡಿನ ಇತರ ಗಂಡುಮೇಕೆಗಳೂ ಅಷ್ಟೇ ಚಡಪಡಿಸತೊಡಗಿದವು. ಒಂದು ದಿನ ಬೆಳಿಗ್ಗೆ ಮೋಜ್ ಇದ್ದ ಕಾಡುಮೇಕೆಗಳ ಗುಂಪು ಇದ್ದಕ್ಕಿದ್ದಂತೆ ಮುಕರ್ತಿ ಬೆಟ್ಟವನ್ನು ಬಿಟ್ಟು ಕಾಡುಮೇಕೆಗಳ ಮುಖ್ಯ ಪ್ರದೇಶಕ್ಕೆ ತೆರಳಿದವು.

ಕೊಂಬುಮುರುಕನ ಹಿಂಡಿನ ವಾಸನೆ ಗಾಳಿಯಲ್ಲಿ ಸಂಚರಿಸಿ ಬಹಳ ದೂರದಲ್ಲೇ ಅವಕ್ಕೆ ತಲುಪಿತು. ಗಾಯದಕಲೆ ಮುಖಿ ವಾಸನೆ ಮೋಜ್‌ನ ಮೂಗಿನ ಮೇಲೆ ಗುದ್ದಿದಂತೆ ಬಡಿಯಿತು. ಇದರಿಂದ ಮೋಜ್ ಬೇಗ ಮುಂದೆ ಧಾವಿಸಿತು. ಗಾಯದಕಲೆ ಮುಖಿಯ ಎದುರು ನಿಂತು, ಹೋರಾಡುವಂತೆ ಸವಾಲು ಹಾಕಿತು. ಗಾಯದಕಲೆ ಮುಖಿ ಸವಾಲನ್ನು ಕಡೆಗಣಿಸಲು ಪ್ರಯತ್ನಿಸಿತು. ಆದರೆ ಮೋಜ್ ಹಠ ಹಿಡಿದಾಗ, ಅದು ಬೆನ್ನನ್ನು ಬಿಲ್ಲಿನಂತೆ ಬಾಗಿಸಿ, ಭಯ ಹುಟ್ಟಿಸುವ ಶೈಲಿಯಲ್ಲಿ ನಿಂತಿತು. ಅನೇಕ ಧೈರ್ಯಶಾಲಿ ಮೇಕೆಗಳು ಇಂತಹ ಭಂಗಿಗೆ ಹೆದರಿ ಅಲ್ಲಿಂದ ಹೋಗಿ ಬಿಡುತ್ತಿದ್ದುವೇನೋ. ಆದರೆ ಮೋಜ್‌ನ ಮೇಲೆ ಇದು ಏನೂ ಪರಿಣಾಮ ಮಾಡಲಿಲ್ಲ. ಅದರ ಮೈಯಲ್ಲಿ ಶಕ್ತಿ ತುಂಬಿದ ಅನುಭವವಾಗಿ ಅದು ಹೋರಾಡಲು ನಿಶ್ಚಯಿಸಿತು.

ಎರಡೂ ಮೇಕೆಗಳು ಸೋಲಲು ಸಿದ್ಧವಾಗಿಲ್ಲದಿದ್ದದ್ದರಿಂದ ಹೋರಾಟ ಜೋರಾಗಿ ಪ್ರಾರಂಭವಾಯಿತು. ಅವು ಒಂದರ ಪಕ್ಕದಲ್ಲೊಂದು ನಿಂತು ಕತ್ತನ್ನು ಹೊರಳಿಸಿ ಪಾರ್ಶ್ವಗಳಿಂದ ಢಿಕ್ಕಿ ಹೊಡೆದವು. ಭುಜಕ್ಕೆ ಭುಜ ತಗುಲಿಸಿ ಪರಸ್ಪರ ನೂಕಿದವು. ನಂತರ ಮುಖಾಮುಖಿಯಾಗಿ ನಿಂತವು. ಹಿಂಗಾಲುಗಳನ್ನು ನೆಲದ ಮೇಲೂರಿ ಮುಂಗಾಲುಗಳನ್ನು ಮೇಲೆತ್ತಿ ಮಿಂಚಿನಂತೆ ಮುನ್ನುಗ್ಗಿ ಹಣಾಹಣಿ ಹೋರಾಡಿದವು. ನಂತರ ಕೆಲವು ಹೆಜ್ಜೆ ಹಿಂದಕ್ಕೆ ಹೋಗಿ ಪುನಃ ಮುನ್ನುಗ್ಗಿದಾಗ ಅವುಗಳ ಕೊಂಬುಗಳು ಕರ್ಕಶ ಶಬ್ದದೊಡನೆ ಪರಸ್ಪರ ಬಲವಾಗಿ ತಾಗಿದವು. ಅವು ಭೀಕರವಾಗಿ ಹೋರಾಡುತ್ತಿದ್ದಂತೆ ಗಾಯದಕಲೆ ಮುಖಿಗೆ ಆಯಾಸವಾಗುತ್ತಿರುವುದು ಸ್ಪಷ್ಟವಾಗತೊಡಗಿತು. ಮೋಜ್‌ನಿಂದ ಹಾಯುವುದನ್ನು ತಪ್ಪಿಸಿಕೊಳ್ಳಲು ಅದು ಮೋಜ್‌ನ ಮೇಲೆ ತನ್ನ ಭಾರವನ್ನು ಬೀಳಿಸಲು ತೊಡಗಿತು. ಮೋಜ್ ಅದಕ್ಕೆ ಈಡಾಗದೆ ಹಿಂದೆ ಸರಿದು ಅದರ ಪೃಷ್ಠದ ಮೇಲೆ ಬಲವಾಗಿ ಹಾಯಿತು. ಗಾಯದಕಲೆ ಮುಖಿ ದೇಹದ ಸಮತೋಲನವನ್ನು ಕಳೆದುಕೊಂಡು ಕೆಳಗೆ ಬಿತ್ತು. ಕೆಳಗೆ ಬಿದ್ದ ಶತ್ರುವಿನ ಅಸಹಾಯಕ ಪರಿಸ್ಥಿತಿಯ ಉಪಯೋಗವನ್ನು ಮೋಜ್ ಪಡೆದುಕೊಳ್ಳಲಿಲ್ಲ. ಬದಲಿಗೆ ಅದು ಎದ್ದು ನಿಂತು ಓಡಿಹೋಗಲು ಅವಕಾಶ ಕೊಟ್ಟಿತು. ಮೋಜ್‌ಗೆ ಈಗ ಹಿಂದಿನ ನಾಯಕತ್ವ



# IX

ಮೋಜ್ ಸೇರಿದಂತೆ ಕಾಡುಮೇಕೆಗಳ ಹಿಂಡೊಂದು ಒಂದು ಪರ್ವತದ ಇಳಿಜಾರಿನಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ, ಸುತ್ತಲಿನ ಪ್ರದೇಶ ಕಾಣುವಂತಹ ಪ್ರಮುಖ ಸ್ಥಳದಲ್ಲಿದ್ದ ಪ್ರಾಯಕ್ಕೆ ಬಂದಿದ್ದ ಹೆಣ್ಣು ಮೇಕೆಯೊಂದು ತನ್ನ ಕಾಲುಗಳನ್ನು ನೆಲಕ್ಕೆ ಅಪ್ಪಳಿಸಿತು. ಅವುಗಳಿದ್ದ ಸ್ಥಳದಿಂದ ಬಹಳ ಕೆಳಗೆ ದನಗಳ ಓಡಾಟದ ಗುರುತು ಸ್ಪಷ್ಟವಾಗಿ ಮೂಡಿದ್ದ ಹಾದಿಯಲ್ಲಿ ಘನವಾದ, ಬಲಿಷ್ಠವಾದ ಭಾರಿ ಹುಲಿಯೊಂದಿತ್ತು. ಆರಂಭದ ಗಾಬರಿ ತಣ್ಣಗಾದಾಗ, ಹಿಂಡು ಹುಲಿಯನ್ನು ಮತ್ತೆ ಗಮನಿಸುವುದಕ್ಕೆ ಹೋಗಲಿಲ್ಲ. ಹುಲಿಯೂ ಮೇಕೆಗಳಲ್ಲಿ ಯಾವುದೇ ಆಸಕ್ತಿ ತೋರಲಿಲ್ಲ. ಈ ಹುಲಿ ಆಗಾಗ ಕಾಣಿಸಿಕೊಳ್ಳುವುದು ಸಾಮಾನ್ಯವಾಯಿತು.

ದಿನಗಳು ಶಾಂತಿಯುತವಾಗಿ ಕಳೆಯುತ್ತಿದ್ದವು. ಒಂದು ಸಂಜೆ ಮೇಕೆಗಳ ಹಿಂಡು ದೂರದಲ್ಲಿ ಹುಲಿಯೊಂದನ್ನು ನೋಡಿತು. ಕೆಲವು ಸಲ ಮನಸ್ಸಿಲ್ಲದ ಮನಸ್ಸಿನಿಂದ ಅಪಾಯದ ಕೂಗುಗಳನ್ನು ಹಾಕಿದ ನಂತರ ಹಿಂಡು ತನ್ನ ಪಾಡಿಗೆ ತಾನಿರತೊಡಗಿತು. ಅವುಗಳ ದೃಷ್ಟಿಯಿಂದಾಚೆಗೆ ಹುಲಿ ಹೊರಟು ಹೋಯಿತು. ಮೇಕೆಗಳ ಹಿಂಡು ಮೇಯುತ್ತಾ ಸಮೀಪದಲ್ಲಿದ್ದ ಬಂಡೆಗಳತ್ತ ಸರಿಯುತ್ತಿತ್ತು. ಅಲ್ಲೇ ರಾತ್ರಿ ಕಳೆಯುವುದು ಅವುಗಳ ಉದ್ದೇಶವಾಗಿತ್ತು. ಅವುಗಳ ಉದ್ದೇಶವನ್ನು ಸರಿಯಾಗಿ ಗ್ರಹಿಸಿದ್ದ ಹುಲಿಯೊಂದು ಈ ಬಂಡೆಗಳತ್ತ ಸಾಗಿ ಅಲ್ಲಿಗೆ ಮೇಕೆಗಳು ಬರುವುದನ್ನೇ ಕಾಯುತ್ತಿತ್ತು. ಮೋಜ್ ಹಿಂಡಿನಲ್ಲಿ ಮುಂದಿತ್ತು ಹಾಗೂ ಮೇಯುತ್ತಾ ಹುಲಿಯತ್ತ ನೇರವಾಗಿ ಹೋಗುತ್ತಿತ್ತು. ಹುಲಿ ಸಂಪೂರ್ಣವಾಗಿ ನಿಶ್ಚಲವಾಗಿತ್ತು. ಅದರ ಬಾಲದ ತುದಿ ಮಾತ್ರ ಜೋರಾಗಿ ಅಲ್ಲಾಡುತ್ತಿತ್ತು. ಮೇಕೆಗಳ ಹಿಂಡಿಗೆ ಹುಲಿಯ ಸುಳಿವು ಕೊಡಲು ಒಂದು ಹುಲ್ಲು ಗರಿಕೆಯೂ ಸಹ ಅಲ್ಲಾಡಲಿಲ್ಲ. ಕೆಲವೇ ಹೆಜ್ಜೆಗಳನ್ನು ಮುಂದಿಟ್ಟಿದ್ದರೆ ಮೋಜ್ ಹುಲಿಯ ಅಕ್ರಮಣಕ್ಕೆ ಸಿಕ್ಕಿಬಿಡುತ್ತಿತ್ತು. ಅಷ್ಟರಲ್ಲಿ ಪ್ರಾಯದ ಒಂದು ಹೆಣ್ಣು ಮೇಕೆ ಮೋಜ್‌ಗಿಂತ ಮುಂದೆ ಹೋಗಿ ಹತ್ತಿರದ ಬಂಡೆಯೊಂದನ್ನು ಹತ್ತಿತು. ಆ ಬಂಡೆಯ ಹಿಂದೆಯೇ ಹುಲಿ ಅಡಗಿತ್ತು. ಈ ಹೆಣ್ಣು ಮೇಕೆ ಮುಂದೇನು ಮಾಡಬೇಕೆಂದು ಯೋಚಿಸುವಷ್ಟರಲ್ಲಿ ಹುಲಿ ಹಾರಿ ಅದನ್ನು ಹೊಡೆದುರುಳಿಸಿತು.

ಇದು ಬೇರೆಯೇ ಹುಲಿಯೊಗಿತ್ತು. ಪ್ರಾಣಿಗಳನ್ನು ಜಾಣತನದಿಂದ ಬೇಟೆಯಾಡುವ ತಾರುಣ್ಯದ ದಷ್ಟಪುಷ್ಟವಾದ ಹುಲಿಯಾಗಿತ್ತು ಇದು. ಕಾಡುಮೇಕೆ, ಕಡವೆ ಮತ್ತು ಊಳಿಡುವ ಜಿಂಕೆಯಂತಹ ವನ್ಯ ಮೃಗಗಳ ಮೇಲೆ ಅದು ತನ್ನ ಗಮನವನ್ನು ಕೇಂದ್ರೀಕರಿಸುತ್ತಿತ್ತು. ಈ ಹುಲಿ ಹಾಗೂ ದನಗಳನು ಹಿಡಿದುಕೊಂಡು ಹೋಗುತ್ತಿದ್ದ ವಯಸ್ಸಾದ ಹುಲಿಯನ್ನು ಪ್ರತ್ಯೇಕವಾಗಿ ಗುರುತಿಸುವುದಕ್ಕೆ ಕಾಡುಮೇಕೆಗ ಳಿಗೆ ಬಹಳ ಸಮಯ ಬೇಕಾಗಲಿಲ್ಲ. ಆದರೆ ತೊಂದರೆಗಳು ಒಂಟಿಯಾಗಿ ಬರುವುದಿಲ್ಲ. ಕಾಡುಮೇಕೆಗಳ ಪ್ರದೇಶದಲ್ಲಿ ಕಪ್ಪುಚಿರತೆಯೊಂದು ಸೇರಿಕೊಂಡು ಅವುಗಳನ್ನು ಕಾಡಲಾರಂಭಿಸಿತು.

ಜೇನು ಗುರುತಿನ ಬೆನ್ನಿನ ಕಾಡುಮೇಕೆಗಳ್ಳ ದೊಡ್ಡ ಸಮಸ್ಯೆಯೆಂದರೆ ಬೇಟೆಯ ಸ್ಮಾರಕಗಳನ್ನು ಸಂಗ್ರಹಿಸುವ ಬೇಟೆಗಾರನದ್ದು. ವೃತ್ತಿಯಲ್ಲಿ ಶಿಕಾರಿಯವನಾಗಿದ್ದ ಬೊಕ್ಕ ಬೇಟೆಗಾರರ ಮಾರ್ಗದರ್ಶಿ ಯಾಗಿದ್ದ. ಜೇನು ಗುರುತಿನ ಬೆನ್ನಿನ ಮೇಕೆಗಳನ್ನು ಗುರುತಿಸಿ, ಅವುಗಳಿರುವ ಸ್ಥಾನಗಳನ್ನು ಶಿಕಾರಿಪಿಯರಿಗೆ



ತಿಳಿಸಲು ಅವನು ಕಾಡುಮೇಕೆಗಳ ಪ್ರದೇಶಕ್ಕೆ ಬಂದಿದ್ದ. ಮೋಜ್ ಅವನ ಕಣ್ಣಿಗೆ ಮೊದಲು ಬಿದ್ದಾಗ, ಅವನು ತನ್ನ ಕಣ್ಣುಗಳನ್ನು ನಂಬದೆ ಹೋದ. ಮೋಜ್‌ನ ಬೆನ್ನಿನ ಮೇಲೆ ಜೀನಿನ ಗುರುತು ಅಂದವಾಗಿ ಮೂಡಿತ್ತು. ಆದರೆ ಬೊಕ್ಕನಿಗೆ ಅದಕ್ಕಿಂತಲೂ ಹೆಚ್ಚು ಆಕರ್ಷಕವಾಗಿ ಕಂಡಿದ್ದೆಂದರೆ ಅದರ ಕೊಂಬುಗಳು. ಮೋಜ್‌ನ ಎರಡೂ ಕೊಂಬುಗಳು ದಾಖಲೆಯ ಅಳತೆಯವು ಎಂಬುದು ಬೊಕ್ಕನಿಗೆ ಖಚಿತವಾಗಿ ತಿಳಿದಿತ್ತು. ಆ ಪ್ರದೇಶದ ಚಿತ್ರವನ್ನು ಮನದಟ್ಟು ಮಾಡಿಕೊಂಡು ತನ್ನ ಮಾಲೀಕನಿಗೆ ವಿಷಯ ತಿಳಿಸಲು ಅವನು ಹಿಂದಕ್ಕೆ ಧಾವಿಸಿದ.

ರಣಜಿತ್ ಸಿಂಗ್‌ಜಿ ಬೊಕ್ಕನ ಮಾಲೀಕನಾಗಿದ್ದ. ಒಂದು ಲೈಸೆನ್ಸ್‌ನಿಂದ ಗುಂಡಿಟ್ಟು ಕೊಲ್ಲಬಹುದಾದ ಪ್ರತಿಯೊಂದು ನಮೂನೆಯ ಬೇಟೆಯ ಪ್ರಾಣಿಯನ್ನು ಕೊಲ್ಲಬೇಕೆಂಬುದು ಅವನ ಮಹದಾಸೆಯಾಗಿತ್ತು. ನೀಲಗಿರಿ ಕಾಡುಮೇಕೆಯನ್ನು ಅವನು ಕೊಂದಿರಲಿಲ್ಲ. ಬೊಕ್ಕ ತಾನು ಕಂಡದ್ದನ್ನು ಅವನಿಗೆ ಹೇಳಿದಾಗ ರಣಜಿತ್ ಸಿಂಗಜಿ ಅದನ್ನು ಸುಲಭವಾಗಿ ನಂಬಲಿಲ್ಲ. ಏಕೆಂದರೆ ಬೇಟೆಗಾರರು ಉತ್ಪ್ರೇಕ್ಷೆ ಮಾಡುವುದು ಅಪರೂಪವೇನಲ್ಲ.



ಆದರೂ ಮರುದಿನವೇ ಬೇಟೆಗಾರರ ತಂಡ ಬೇಟೆ ಪ್ರಾರಂಭಿಸಿತು. ಕಾಡುಮೇಕೆಗಳ ಪ್ರದೇಶದಲ್ಲಿ ಶಿಬಿರ ಹೂಡಿದರು. ಪಕ್ಷಿಗಳು ಮತ್ತು ವನ್ಯ ಮೃಗಗಳ ಶಬ್ದಗಳ ಹೊರತಾಗಿ ಇಡೀ ಸ್ಥಳ ಮೌನವಾಗಿತ್ತು. ಹೊಳೆಗಳ ನೀರು ತಿಳಿಯಾಗಿದ್ದು ಹೊಳೆಯುತ್ತಿತ್ತು. ರಣಜಿತ್ ಸಿಂಗ್‌ಜಿ ಇಂತಹ ಅರಣ್ಯ ಪ್ರದೇಶವನ್ನು ಹಿಂದೆಂದೂ ನೋಡಿರಲಿಲ್ಲ.

ಕಾಡುಮೇಕೆಗಳ ದೊಡ್ಡ ಹಿಂಡೊಂದನ್ನು ಬೇಟೆಗಾರರು ಕಂಡರು. ಆದರೆ ಅದರಲ್ಲಿ ಮೋಜ್ ಇರಲಿಲ್ಲ. ಹಿಂಡನ್ನು ದಾಟಿ, ಅದರ ಆಚೆಗಿದ್ದ ಪ್ರದೇಶವನ್ನು ಶೋಧಿಸುವ ಪ್ರಯತ್ನದಲ್ಲಿ, ಬೊಕ್ಕ ತನಗೇ ತಿಳಿಯದೆ, ಎಚ್ಚರದಿಂದಿದ್ದ ಹೆಣ್ಣು ಕಾಡುಮೇಕೆಗೆ ಕಾಣಿಸಿಕೊಂಡ. ಅದರಿಂದಾಗಿ ಇಡೀ ಹಿಂಡೇ ಓಡಿಹೋಯಿತು. ಸಮೀಪದಲ್ಲಿ ತಗ್ಗಿನಲ್ಲಿ ಮೇಯುತ್ತಿದ್ದ ಮೋಜ್ ಓಡುತ್ತಿದ್ದ ಹಿಂಡನ್ನು ನೋಡಿ ತಾನೂ ಹಿಂಡಿನ ಹಿಂದೆ ಓಡಿತು. ರಣಜಿತ್ ಸಿಂಗ್‌ಜಿ ತನ್ನ ಪ್ರಬಲವಾದ ದುರ್ಬೀನುಗಳಿಂದ ಓಡುತ್ತಿದ್ದ ಮೋಜ್ ಅನ್ನು ದೃಷ್ಟಿಸಿ ನೋಡಿದ. ಅನುಭವಿ ಬೇಟೆಗಾರನಾಗಿದ್ದ ಆತನಿಗೆ ತಲೆಗಳ ಗಾತ್ರವನ್ನು ಅಂದಾಜು ಮಾಡುವ ಸಾಮರ್ಥ್ಯ ಚೆನ್ನಾಗಿತ್ತು. ಮೋಜ್‌ನ ಕೊಂಬುಗಳು ದಾಖಲೆಗೆ ಅರ್ಹವಾದ 44.5 ಸೆಂ.ಮೀ.ಗಳಿಗೂ ಹೆಚ್ಚಿನ ಅಳತೆಯದ್ದೆಂದು ಆ ದೂರದಲ್ಲೂ ಆತನಿಗೆ ಖಚಿತವಾಗಿತ್ತು.

ಬೇಟೆಗಾರರ ತಂಡ ಮುಂದಿನ ಕೆಲವು ದಿನಗಳಲ್ಲಿ ಆ ಪ್ರದೇಶವನ್ನು ಶೋಧಿಸಿತಾದರೂ, ಆ ಕಾಡುಮೇಕೆ ಅದೃಶ್ಯವಾದಂತೆ ತೋರುತ್ತಿತ್ತು. ಈ ಸಮಯದಲ್ಲಿ ಬೊಕ್ಕ ತನ್ನ ಮಾಲೀಕನನ್ನು ಅವನ ಬಂದೂಕಿನ ವ್ಯಾಪ್ತಿಯಲ್ಲಿ ಬರುವಂತೆ ಉತ್ತಮ ಜೀನಿನ ಗುರುತಿನ ಮೇಕೆಯ ಬಳಿ ಒಯ್ದಿದ್ದ. ಆದರೆ ಅದಕ್ಕೆ ಗುಂಡಿಕ್ಕಲು ಅವನು ನಿರಾಕರಿಸಿದ. ಏಕೆಂದರೆ ದಾಖಲೆಯ ತಲೆಯೊಂದನ್ನು ಬುಟ್ಟಿಗೆ ಹಾಕಿಕೊಳ್ಳಲು ಅವನು ನಿಶ್ಚಯಿಸಿದ್ದ; ಒಂದು ಪ್ರಾಣಿಯನ್ನು ಕೊಲ್ಲುವುದಕ್ಕೆ ಮಾತ್ರ ಲೈಸೆನ್ಸ್ ಸೀಮಿತವಾಗಿತ್ತು. ಕೆಲವು ದಿನಗಳ ನಂತರ ಬೊಕ್ಕ ದೂರದಲ್ಲಿ ಮೋಜ್‌ನನ್ನು ನೋಡಿದ. ಆದರೆ ಬೇಟೆಗಾರ ಅರ್ಧ ದೂರವನ್ನು ಎಚ್ಚರಿಕೆಯಿಂದ ದಾಟಿದಂತೆ, ಕಣಿವೆಯಿಂದ ಮಂಜು ಮೇಲೇರಿ ಬಿಳಿಯ ಹತ್ತಿಯನ್ನು ಹರಡಿದಂತೆ ಇಡೀ ಪ್ರದೇಶವನ್ನು ಆವರಿಸಿತು. ಕೆಲವೇ ಮೀಟರುಗಳಿಂದಾಚೆಗೆ ಏನೂ ಕಾಣದಂತಾಯಿತು. ಮಂಜು ಚದುರಿದಾಗ, ಕಾಡುಮೇಕೆ ಕಾಣೆಯಾಗಿತ್ತು.

ಬೇಟೆಯ ಪ್ರದೇಶದಲ್ಲಿ ಗಂಟೆಗಟ್ಟಲೆ ಆವರಿಸುತ್ತಿದ್ದ ಮಂಜಿಗಿಂತ ವರ್ಷದ ಆ ಸಮಯದಲ್ಲಿ ಅಡ್ಡಾದಿಡ್ಡಿಯಾಗಿ ಬೀಸುತ್ತಿದ್ದ ಗಾಳಿ ಬೇಟೆಗೆ ಅಡಚಣೆಯೊಡ್ಡುತ್ತಿತ್ತು. ಮೋಜ್ ಅಪಾಯದ ಸೂಚನೆಯನ್ನು ಗ್ರಹಿಸಿ ಸದಾ ಎಚ್ಚರದಿಂದಿರುತ್ತಿತ್ತು. ಅದು ತನ್ನಷ್ಟಕ್ಕೆ ತಾನಿರಲು ಪ್ರಾರಂಭಿಸಿತು. ಒಂದಿಷ್ಟು ಅಪಾಯದ ಸುಳಿವು ಸಿಕ್ಕಿದರೂ ಬೆಟ್ಟದ ತುದಿಗಳಿಂದ ವೇಗವಾಗಿ ಕೆಳಗಿಳಿಯುತ್ತಿತ್ತು.

ಒಂದು ದಿನ ಬೊಕ್ಕ ಬೇಟೆಗಾಗಿ ಎಂದಿಗಿಂತ ಬೇಗ ಎದ್ದು ಹೊರಡಬೇಕೆಂದು ಸಿದ್ಧತೆ ನಡೆಸಿದ. ಬೊಕ್ಕ ಸಂಶಯಪಟ್ಟಂತೆ, ಮೋಜ್ ಸಹ ಮೇಯುವುದಕ್ಕಾಗಿ ಬೇಗ ಹೊರಗೆ ಬಂದು ಬೆಟ್ಟದ ತುದಿಯತ್ತ

ಮೇಯುತ್ತಾ ಹೋಗುತ್ತಿತ್ತು. ಅವರ ಜೇನು ಗುರುತಿನ ಮೇಕೆ ಬಹಳ ದೂರದಲ್ಲಿತ್ತು. ಅದು ಬೆಟ್ಟದ ಕೋಡುಗಳ ಸುರಕ್ಷಣೆಯ ಸ್ಥಾನವನ್ನು ತಲುಪುವುದಕ್ಕೆ ಮೊದಲೇ ಬೇಟೆಗಾರರು ತಮ್ಮ ಬೇಟೆಯನ್ನು ಸಮೀಪಿಸಲು ಸಾಧ್ಯವೇ ಎಂಬುದೇ ಪ್ರಶ್ನೆಯಾಗಿತ್ತು. ಅಲ್ಲಲ್ಲಿದ್ದ ಕಲ್ಲುಬಂಡೆ, ಕೊರಕಲುಗಳ ಹಿಂದೆ ಅವಿತಿಟ್ಟುಕೊಳ್ಳುತ್ತಾ ಅವಿತುಕೊಳ್ಳಲು ಏನೂ ಸಿಗದೆ ಇದ್ದಾಗ, ಸುಟ್ಟ ನಿತ್ಯ ಹಸಿರು ಸಸ್ಯಗಳ ತುಂಡುಗಳ ಹಿಂದೆ ಅವಿತು ಬೊಕ್ಕ ಬೇಟೆಗಾರನನ್ನು ಬೇಟೆಯ ಸಮೀಪಕ್ಕೆ ಬೇಗ ಕರೆತಂದ. ಬೇಟೆಗಾರ ಮತ್ತು ಬೇಟೆಯ ನಡುವೆ ಇನ್ನೂರೈವತ್ತು ಮೀಟರ್ ಅಂತರ ಮಾತ್ರ ಇತ್ತು. ಗುಂಡು ಖಚಿತವಾಗಿ ಬೀಳುವಂತೆ ಪ್ರಾಣಿಗೆ ಇನ್ನೂ ಸಮೀಪ ತಾನು ಕರೆದೊಯ್ಯುವುದಾಗಿ ಬೊಕ್ಕ ಸನ್ನೆಗಳಿಂದ ತಿಳಿಸಿದ. ಆದರೆ ರಣಜಿತ್ ಸಿಂಗ್‌ಜಿ ಅದಕ್ಕೆ ಗಮನ ಕೊಡುವ ಸ್ಥಿತಿಯಲ್ಲಿರಲಿಲ್ಲ. ಅವನು ಉತ್ತೇಜಿತನಾಗಿದ್ದ. ಅಲ್ಲದೆ ಬೇಟೆ ಬೆದರಿದಂತೆ ಕಾಣುತ್ತಿತ್ತು. ಬೇಟೆಗಾರ ಬೇಗ ಗುರಿಯಿಟ್ಟು ಗುಂಡು ಹಾರಿಸಿದ. ಮೋಜ್ ಕಲ್ಲಿನಂತೆ ಕೆಳಗೆ ಬಿತ್ತು. ಬೊಕ್ಕ "ಚೆನ್ನಾಗಿ ಗುಂಡು ಹಾರಿಸಿದಿರಿ, ಸರ್" ಎಂದು ಕೂಗಿದವನೇ ಮಾಲೀಕನ ಸಮೇತ ವಿಜಯದ ಕುರುಹನ್ನು ಪಡೆಯಲು ಮುಂದೆ ಧಾವಿಸಿದ.

ಕೆಳಗೆ ಬಿದ್ದಿದ್ದ ಪ್ರಾಣಿಯನ್ನು ಸಮೀಪದಿಂದ ಗಮನಿಸಿದಾಗ ಅದರ ಕೊಂಬುಗಳು ದಾಖಲೆಯಳತೆಯದ್ದಾಗಿವೆ ಎಂಬುದರಲ್ಲಿ ಯಾವ ಅನುಮಾನವೂ ಉಳಿಯಲಿಲ್ಲ. ಇಬ್ಬರೂ ತಮಗೆ ಸಿಕ್ಕ ಬೇಟೆಯ ಬಗ್ಗೆ ಹಿಗ್ಗುತ್ತಿದ್ದಾಗ, ಮೋಜ್ ಅಲ್ಲಾಡಿತು. ಗುಂಡು ಅದರ ಬೆನ್ನುಮೂಳೆಯನ್ನು ಸೋಕಿಸಿ, ಅದನ್ನು ಎಚ್ಚರ ತಪ್ಪಿಸಿತ್ತು." ಬೇಗ ಇನ್ನೊಂದು ಗುಂಡು ಹಾಕಿ" ಎಂದು ಬೊಕ್ಕ ಕೂಗಿಕೊಂಡ. ಮೋಜ್ ಪ್ರಯಾಸದಿಂದ ಎದ್ದು ನಿಂತಿತು. ರಣಜಿತ್ ತನ್ನ ರೈಫಲನ್ನು ಮೇಲೆತ್ತಿ ನಳಿಕೆಯನ್ನು ಒತ್ತಿದ. ಆದರೆ ಅದರಿಂದ ಕೃಶವಾದ ಸಪ್ಪಳ ಹೊರಟಿತು. ಪುನಃ ಗುಂಡು ತುಂಬಲು ಅವನು ಮರೆತಿದ್ದ. ಈ ಹೊತ್ತಿಗೆ ಮೋಜ್ ಒಂದು ಪ್ರಪಾತದ ಅಂಚು ತಲುಪಿ ತನ್ನೆಲ್ಲ ಶಕ್ತಿಯನ್ನು ಉಪಯೋಗಿಸಿ ಆ ಅಂಚಿನಾಚೆಗೆ ಬಿತ್ತು.

ಬೇಟೆಗಾರರು ಓಡಿ ಹೋಗಿ ಅಲ್ಲಿಂದ ಬಗ್ಗಿ ನೋಡಿದರು. ತಮ್ಮ ವಿಜಯದ ಸಂಕೇತ ಕಲ್ಲುಬಂಡೆಗಳಿಗೆ ಬಡಿಯುತ್ತಾ, ಬಡಿಯುತ್ತಾ ಕೆಳಗಿನ ಕಣಿವೆಗೆ ಬೀಳುವುದನ್ನು ಕಾಣುವ ನಿರೀಕ್ಷೆ ಅವರದಾಗಿತ್ತು. ಆಧರೆ ಅಲ್ಲಿ ಅವರ ಕಣ್ಣಿಗೆ ಏನೂ ಕಾಣಲಿಲ್ಲ. ಮೋಜ್ ಅದೃಶ್ಯವಾಗಿತ್ತು.



# X

ಬೇಟೆಯ ಚಟುವಟಿಕೆ ಇದ್ದಕ್ಕಿದ್ದಂತೆ ಹೆಚ್ಚಾಗಿದ್ದನ್ನು ಕಾರ್ನೋಜ್ ಗಮನಿಸಿದ. ನೀಲಗಿರಿ ಪ್ರಸ್ಥಭೂಮಿಯಲ್ಲಿ ಅದ್ಭುತವಾದ ಜೇನಿನ ಗುರುತಿನ ಮೇಕೆ ಇದೆ ಎಂಬ ಮಾತು ಎಲ್ಲೆಡೆ ಹರಡಿತ್ತು. ಇದರಿಂದಾಗಿ ಜಗತ್ತಿನೆಲ್ಲೆಡೆಯಿಂದ ಬೇಟೆಗಾರರು ನೀಲಗಿರಿಗೆ ಬರುವಂತಾಯಿತು.

ಹುಲಿಯನ್ನು ಬೇಟೆಯಾಡಲು ಎರೆಯಾಗಿ ಬಳಸುವುದಕ್ಕಾಗಿ ಎಮ್ಮೆಯೊಂದನ್ನು ಕೊಳ್ಳುವ ನೆಪದಲ್ಲಿ ಒಂದು ದಿನ ಬೊಕ್ಕ ಮೋಘ್‌ಮಂಡ್‌ಗೆ ಬಂದ. ಆದರೆ ಮುಕರ್ತಿ ಬೆಟ್ಟದಲ್ಲಿ ಮೋಜ್ ಇದೆಯೇನೋ ಎಂದು ನೋಡುವುದೇ ಅವನ ನಿಜವಾದ ಉದ್ದೇಶವಾಗಿತ್ತು. ಕಾರ್ನೋಜ್ ಅವನೊಂದಿಗೆ ಮಾತಿಗೆ ತೊಡಗಿದ. ಜಾಣತನದಿಂದ ಪ್ರಶ್ನೆಗಳನ್ನು ಕೇಳಿ, ಪ್ರತಿಯೊಬ್ಬರೂ ಬೇಟೆಯಾಡಲು ಇಚ್ಛಿಸಿದ್ದ ಜೇನು ಗುರುತಿನ ಮೇಕೆಯನ್ನು ಅದರ ಕತ್ತಿನ ಸುತ್ತಲೂ ಇದ್ದ ಗಾಯದ ಕಲೆಯಿಂದ ಗುರುತಿಸಲಾಗುತ್ತಿತ್ತು ಎಂಬುದನ್ನು ತಿಳಿದುಕೊಂಡ. ಇನ್ನೂ ಹೆಚ್ಚು ವಿಷಯ ತಿಳಿದುಕೊಳ್ಳಲು ಜೇನು ಗುರುತಿನ ಈ ದೊಡ್ಡ ಮೇಕೆಯನ್ನು ಪತ್ತೆ ಹಚ್ಚಲು ಸಹಾಯ ಮಾಡುವುದಾಗಿ ಕಾರ್ನೋಜ್ ಹೇಳಿಕೊಂಡ. ಬೊಕ್ಕ – ಹಿಂದೆ ನಡೆದ ದೊಡ್ಡ ಬೇಟೆ ಹಾಗೂ ಮೋಜ್ ಇನ್ನೂ ಬದುಕಿದೆ ಎಂಬ ತನ್ನ ನಂಬಿಕೆ – ಎಲ್ಲವನ್ನೂ ಕಾರ್ನೋಜನಿಗೆ ಹೇಳಿದ.

ಮೋಜ್ ಪ್ರಪಾತದಂಚಿನಾಚೆ ಉರುಳಿ ಬೀಳುತ್ತಿದ್ದಾಗ ಮುಂದೆ ಚಾಚಿಕೊಂಡಿದ್ದ ಒಂದು ಬಂಡೆ ಅದು ಕೆಳಗೆ ಬೀಳುವುದನ್ನು ತಡೆದಿತ್ತು. ಬಂಡೆ ಒಳಗಡೆಗೆ ಇಳಿಜಾರಾಗಿತ್ತು. ಆದ್ದರಿಂದ ಮೋಜ್ ಅಲ್ಲೇ ಹಿಂದೆ ಸರಿದು ಆ ಬಂಡೆಯ ಮುಖದಲ್ಲಿದ್ದ ಟೊಳ್ಳು ಭಾಗದಲ್ಲಿ ಅಡಗಿತ್ತು. ಹೀಗಾಗಿ ಬೇಟೆಗಾರ ಕಣ್ಣಿಗೆ ಅದು ಬೀಳಲಿಲ್ಲ. ಅಲ್ಲಿ ಅದು ರಕ್ತ ಸುರಿಸುತ್ತಾ ನೋವಿನಿಂದ ನರಳುತ್ತಿತ್ತು. ನಾಲಿಗೆಗೆ ಗಾಯ ಎಟುಕದೆ ಇದ್ದುದರಿಂದ ಗಾಯವನ್ನು ಸ್ವಚ್ಛ ಮಾಡುವುದು ಅದಕ್ಕೆ ಆಗಲಿಲ್ಲ. ಇದರಿಂದಾಗಿ ಗಾಯ ಒಣಗಲು ಬಹಳ ಸಮಯ ಹಿಡಿಯಿತು. ಕೊನೆಗೆ ಮೋಜ್‌ಗೆ ಎದ್ದು ನಿಲ್ಲಲು ಶಕ್ತಿ ಬಂದಾಗ, ಅಲ್ಲಿಂದ ಹೊರಗೆ ಹೋಗಲು ಅದಕ್ಕೆ ತುಂಬಾ ಹೆದರಿಕೆಯಾಗಿತ್ತು. ಕೊನೆಗೆ ಬಾಯಾರಿಕೆ ಮತ್ತು ಹಸಿವು ತಡೆಯಾಲಾರದೆ ಅದು ಹೊರಗೆ

ಬಂತು. ಅದು ಒಂದು ಸಂಜೆ ಎಲ್ಲವೂ ಮೌನಾವಾಗಿದ್ದಾಗ ಬೆಟ್ಟದ ಕೋಡನ್ನು ಹತ್ತಿ, ಸಮೀಪದಲ್ಲಿದ್ದ ಹುಲ್ಲು ಮತ್ತು ಸಸಿಗಳನ್ನು ಮೇಯ್ದು ದೊಡ್ಡ ಶೋಲದಿಂದ ಹರಿಯುತ್ತಿದ್ದ ಸಣ್ಣ ಹೊಳೆಯಲ್ಲಿ ನೀರು ಕುಡಿಯಿತು. ಶೋಲ ತಂಪಾಗಿತ್ತು. ಇಲ್ಲೇ ಬಂದಿರು ಎಂದು ಹೇಳುತ್ತಿದ್ದಂತಿತ್ತು. ಅಲ್ಲಿ ಅವಿತಿಟ್ಟುಕೊಳ್ಳಲು ಬೇಕಾದಷ್ಟು ಸ್ಥಳಗಳಿದ್ದವು. ಅಲ್ಲೇ ಆಶ್ರಯ ಪಡೆಯಲು ಮೋಜ್ ನಿರ್ಧರಿಸಿತು. ಶೋಲಗಳಲ್ಲಿ ಬೇಟೆಗಾಗಿ ಕಾದಿರಬಹುದಾದ ಹುಲಿ, ಚಿರತೆ ಮುಂತಾದವುಗಳ ಭಯದಿಂದ ಸಾಮಾನ್ಯವಾಗಿ ಕಾಡುಮೇಕೆಗಳು ಅವುಗಳಿಂದ ದೂರವಿರುತ್ತವೆ. ಆದರೆ ಹುಲಿ, ಚಿರತೆಗಳು ಹಾಗೂ ಮನುಷ್ಯನ ನಡುವೆ ಹೋಲಿಸಬೇಕಾದಾಗ ಹುಲಿ, ಚಿರತೆಗಳ ಅಪಾಯವೇ ಕಡಿಮೆ ಎಂದು ಮೋಜ್‌ಗೆ ತೋರಿತು.

ಈ ಮಧ್ಯೆ, ಬೊಕ್ಕ ಕಾಡುಮೇಕೆಗಳ ಪ್ರದೇಶವನ್ನು ಶೋಧಿಸುತ್ತಿದ್ದ. ಒಂದು ಶೋಲದ ಪಕ್ಕದಲ್ಲಿದ್ದ ಸಣ್ಣ ಹೊಳೆಯ ತಳದಲ್ಲಿ ದೊಡ್ಡ ಗಂಡು ಕಾಡುಮೇಕೆಯ ಹೆಜ್ಜೆಗಳ ಗುರುತುಗಳನ್ನು ಅವನು ಗಮನಿಸಿದ. ಅದು ಆಗತಾನೆ ಹಾಕಿದ್ದ ಹಿಕ್ಕೆಗಳನ್ನೂ ಒಣಗಿದ್ದ ರಕ್ತದ ಹನಿಗಳನ್ನೂ ಅವನು ಕಂಡ: ಅವನು ಹುಡುಕುತ್ತಿದ್ದ ಪುರಾವೆ ಇಲ್ಲಿತ್ತು. ರಣಜಿತ್ ಸಿಂಗ್‌ಜಿಯನ್ನು ಕರೆಯಲು ಅವನು ಅವಸರವಾಗಿ ಹೋದ.

ಬೊಕ್ಕನೊಂದಿಗೆ ಆಡಿದ ಮಾತುಗಳಿಂದ ಕಾರ್ನೋಜ್ ಚಿಂತೆಗೊಳಗಾಗಿದ್ದ. ತಾನು ಕೇಳಿದ್ದನ್ನು ಅವನು ಸಿಮಿಲ್‌ಗೆ ಹೇಳಿದ. ಅವರಿಬ್ಬರೂ ಮೋಜ್‌ಅನ್ನು ಉಳಿಸುವ ಹಲವು ಉಪಾಯಗಳ ಬಗ್ಗೆ ಚರ್ಚಿಸಿದರು. ಮೊನೆಗಾರ ಕೋಡನ್‌ನ ಮುಂದೆ ಈ ಸಮಸ್ಯೆಯನ್ನಿಡಲು ಅವರು ನಿರ್ಧರಿಸಿದರು. ಮೋಜ್‌ಅನ್ನು ಬೆದರಿಸಿ, ಬೇಟೆಗಾರರಿಂದ ದೂರ ಹೋಗುವಂತೆ ಮಾಡುವುದೇ ಅತ್ಯುತ್ತಮ ಎಂದು ಅವರು ನಿರ್ಧರಿಸಿದರು. ಮುಂಗಾರು ಮಳೆ ಬೇಗ ಪ್ರಾರಂಭವಾಗುತ್ತದೆ. ಆಗ ಬೇಟೆಗಾರರು ಹೊರಟು ಹೋಗುತ್ತಾರೆ. ಇದರಿಂದ ಮುಂದಿನ ಮೂರು ತಿಂಗಳು ಮೋಜ್‌ಗೆ ಸ್ವಲ್ಪ ವಿರಾಮ ದೊರೆಯುತ್ತದೆ ಎಂದು ಕೋಡನ್ ತರ್ಕಿಸಿದ.

ಕಾರ್ನೋಜನೊಂದಿಗೆ ಹೋಗಲು ಇಬ್ಬರು ತೋಡ ತರುಣರು ಮುಂದೆ ಬಂದರು. ಕಾಡುಮೇಕೆಗಳ ಪ್ರದೇಶವನ್ನು ತೋಡರು ತಲುಪಿದ ಸಮಯಕ್ಕೆ ಬೊಕ್ಕ ಮತ್ತು ರಣಜಿತ್ ಸಿಂಗ್‌ಜೀ ಅವರೂ ಅಲ್ಲಿಗೆ ಹೋದರು. ಬೊಕ್ಕನಷ್ಟು ಚೆನ್ನಾಗಿ ಅಲ್ಲದೆ ಹೋದರೂ, ತೋಡರಿಗೆ ಆ ಪ್ರದೇಶದ ಪರಿಚಯ ಚೆನ್ನಾಗಿಯೇ ಇತ್ತು. ಅವರು ಸದ್ದುಗದ್ದಲವಿಲ್ಲದೆ ತಮ್ಮ ಕೆಲಸ ಮಾಡಿದರು. ಬೇಟೆಗಾರರಿಗಿಂತ ಯಾವಾಗಲೂ ಮುಂದೆ ಹೋಗುವಲ್ಲಿ ಅವರು ಯಶಸ್ವಿಯಾಗಿ ಯಾವುದೇ ಕಾಡುಮೇಕೆಗಳನ್ನು ಕಂಡರೆ, ಅವುಗಳನ್ನು ಅಲ್ಲಿಂದ ಬೇರೆಡೆಗೆ ಓಡಿಸುತ್ತಿದ್ದರು. ಬೇಟೆಗಾರರಿಗೆ ಸಿಗದಂತೆ ಮಾಡುವುದೇ ಅವರ ಉದ್ದೇಶವಾಗಿತ್ತು. ಮೋಜ್ ಎಲ್ಲಾದರೂ ಕಾಣುತ್ತದೇನೋ ಎಂದು ಅವರು ವಿಶೇಷವಾಗಿ ಗಮನಿಸುತ್ತಿದ್ದರು. ಸ್ವಲ್ಪ ಸಮಯದ ನಂತರ, ಬೇಟೆಗಾರರ ಇನ್ನೆರಡು ತಂಡಗಳು ಕಾಡುಮೇಕೆಗಳ ಪ್ರದೇಶವನ್ನು ತಲುಪಿದವು. ಅವುಗಳ ಉದ್ದೇಶವೂ ಮೋಜ್‌ಅನ್ನು ಬೇಟೆಯಾಡುವುದೇ ಆಗಿತ್ತು. ಮೂವರು ತೋಡರು ಬೇರೆ ಬೇರೆಯಾದರು. ಬೇಟೆಗಾರರ

ಪ್ರತಿ ತಂಡವನ್ನು ಪ್ರತ್ಯೇಕವಾಗಿ ಗಮನಿಸತೊಡಗಿದರು. ಬೇಟೆಗಾರರು ತೋಡರನ್ನು ಆಗಾಗ ಕಂಡರೂ ಸಹ, ತೋಡರು ತಮ್ಮ ಗುಡಿಸಲುಗಳ ಛಾವಣಿಗಳಿಗೆ ಬೇಕಾದ ವಸ್ತುಗಳ ಸಂಗ್ರಹಣೆಯಲ್ಲಿ ತೊಡಗಿದ್ದವರಂತೆ ಕಂಡಿದ್ದರಿಂದ ಅವರ ಮೇಲೆ ಬೇಟೆಗಾರರು ಸಂಶಯ ಪಡಲಿಲ್ಲ.

ಮೋಜ್ ಆಶ್ರಯ ಪಡೆದಿದ್ದ ಶೋಲದಲ್ಲಿ ಒಂದು ರಾತ್ರಿ ಕಾರ್ನೋಜ್ ತಂಗಿದ. ಮನುಷ್ಯನ ವಾಸನೆ ಮೂಗಿಗೆ ಬಡಿದ ಕೂಡಲೇ ಮೋಜ್ ಅಲ್ಲಿಂದ ಪರಾರಿಯಾಗಲು ಸಿದ್ಧವಾಯಿತು. ಆದರೆ ವಾಸನೆಯಲ್ಲಿ ಏನೋ ಪರಿಚಿತವಾದದ್ದಿದೆ ಎಂದು ಅದಕ್ಕನಿಸಿದಾಗ ಅದು ಓಡಿ ಹೋಗಲು ಹಿಂಜರಿಯಿತು. ಮೈ ಕಾಯಿಸಿಕೊಳ್ಳಲು ಬೆಂಕಿಯನ್ನು ಹೊತ್ತಿಸಿದ್ದ ಕಾರ್ನೋಜ್ ಆಗ ತೋಡರ ಪ್ರೇಮಗೀತೆಯೊಂದನ್ನು ಹಾಡಿದ:

"......ನೀನು ಕಗ್ಗತ್ತಲ ರಾತ್ರಿಯಾಗುವೆಯಾದರೆ
ಬಿಳಿ ಪತಂಗವಾಗಿ ಕುಣಿಯುವ ಆಸೆ ನನ್ನದು."

ಮೋಜ್ ಅವನ ಧ್ವನಿಯನ್ನು ಗುರುತಿಸಿತಲ್ಲದೆ ಆ ರಾತ್ರಿಯನ್ನು ಶೋಲದಲ್ಲೇ ಕಳೆಯಿತು. ಎಷ್ಟೋ ಕಾಲದ ನಂತರ ನೆಮ್ಮದಿಯಿಂದ ಕಳೆದ ರಾತ್ರಿಯಾಗಿತ್ತು ಅದು.



ಮೋಜ್ ಸಾಮಾನ್ಯವಾಗಿ ಮುಂಜಾನೆಯೇ ಹೊರಬಂದು ಶೋಲದ ಸಮೀಪದಲ್ಲಿದ್ದ ಗುಡ್ಡದ ಇಳಿಜಾರಿನಲ್ಲಿ ಮೇಯುತ್ತಿತ್ತು. ನಂತರ ಶೋಲಕ್ಕೆ ಹಿಂತಿರುಗುತ್ತಿತ್ತು ಅಥವಾ ಬೇಟೆಗಾರರು ಏಳುವುದಕ್ಕೆ ಮೊದಲೇ ಹೊಸ ಶೋಲಕ್ಕೆ ಹೋಗುತ್ತಿತ್ತು. ಕಾರ್ನೋಜ್‌ಗೆ ಬೆಳಿಗ್ಗೆ ಬೇಗ ಏಳುವ ಅಭ್ಯಾಸವಿತ್ತು. ಹಳ್ಳದಲ್ಲಿ ಮುಖ ತೊಳೆಯಲು ಬಂದಾಗ ಅವನು ಮೋಜ್‌ನನ್ನು ನೋಡಿದ. ತನ್ನ ಗೆಳೆಯ ಬದುಕಿರುವುದನ್ನು ಕಂಡು ಅವನಿಗೆ ಬಹಳ ಸಮಾಧಾನವಾಯಿತು. ಮೋಜ್‌ಅನ್ನು ಸ್ವಲ್ಪ ಸಮಯ ನೋಡಿದ ನಂತರ ಕಾರ್ನೋಜ್ ಸಣ್ಣ ದನಿಯಲ್ಲಿ ಅದನ್ನು ಮಾತನಾಡಿಸಿದ. "ಮೋಜ್, ನೀನು ನಮ್ಮಲ್ಲಿಗೆ ವಾಪಸು ಬಂದರೆ ಎಷ್ಟು ಚೆನ್ನಾಗಿರುತ್ತದೆ ಅಲ್ಲವೇ? ನಾವು ನಿನ್ನನ್ನು ಕಾಪಾಡುತ್ತೇವೆ ಹಾಗೂ ಯಾರೂ ನಿನಗೆ ತೊಂದರೆ ಕೊಡುವುದಕ್ಕೆ ಬಿಡುವುದಿಲ್ಲ" ಎಂದು ಹೇಳಿದ. ಮೋಜ್ ನಿಂತು ಅವನ ಮಾತುಗಳನ್ನು ಕೇಳಿತು. ಕಾರ್ನೋಜ್





ಜೊತೆಯಲ್ಲಿ ತಂದಿದ್ದ ಎಲ್ಲ [illegible]ಯನ್ನೂ ಮುಗಿಸಿಬಿಟ್ಟಿದ್ದ. ಆದ್ದರಿಂದ ಅಲ್ಲಿಂದ ಹೊರಡಲು ತೀರ್ಮಾನಿಸಿದ. ಮೋಜ್ ತನ್ನನ್ನು ಹಿಂಬಾಲಿಸಿ ಬರುತ್ತದೆ ಎಂಬುದು ಅವನ ಆಸೆಯಾಗಿತ್ತು. ಅಷ್ಟು ಹೊತ್ತಿಗೆ ಸೂರ್ಯ ಮೇಲೆ ಬಂದಿದ್ದ. ಕಾರ್ನೋಜ್ ಸೂರ್ಯನ ಕಡೆ ತಿರುಗಿ ತೋಡರ ರೀತಿಯಲ್ಲಿ ಬಲಗೈಯನ್ನೆತ್ತಿ ಹಣೆಗೆ ಮುಟ್ಟಿಸಿ 'ಸೋಮಿ' – ಅಂದರೆ 'ಸ್ವಾಮಿ' – ಎಂದು ಹೇಳಿ ವಂದಿಸಿದ.

ಮರುದಿನ ಸಂಜೆ, ದಿನದ ಕೆಲಸ ಮುಗಿದ ನಂತರ ಕಾರ್ನೋಜ್ ಮತ್ತು ಸಿಮಿಲ್ ಮುಕುರ್ತಿ ಬೆಟ್ಟದ ಮೇಲೆ ಸ್ವಲ್ಪ ದೂರ ಹೋಗಿ ಒಂದು ಬಂಡೆಯ ಮೇಲೆ ಕುಳಿತು ಪರ್ವತ ಶಿಖರದಿಂದ ಸೂರ್ಯಾಸ್ತವಾಗುವುದನ್ನು ನೋಡುತ್ತಿದ್ದರು. ಅಲ್ಲಿ ತೇಲುತ್ತಿದ್ದ ಮಂಜಿನ ನಡುವೆ ಮೋಜ್ ನಿಂತಿತ್ತು. ಸಿಮಿಲ್ ಸಂತೋಷದಿಂದ ಜೋರಾಗಿ ಕೂಗಿಕೊಂಡಾಗ ತೋಡರೆಲ್ಲರೂ ತಮ್ಮ ಗುಡಿಸಲುಗಳಿಂದ ಹೊರಗಡೆ ಬಂದರು. ಅಲ್ಲಿ ಸೇರಿದ ತೋಡರೆಲ್ಲರೂ ಖುಷಿಯಿಂದ ಜೋರಾಗಿ ಕೂಗಿ ಮೋಜ್ ಅನ್ನು ಸ್ವಾಗತಿಸಿದರು. ಮೋಜ್ ಮನೆಗೆ ಬಂದಿತ್ತು.



# XI

ಮಳೆಗಾಲದ ನಂತರ ಬೊಕ್ಕ ಪುನಃ ಕಾಡುಮೇಕೆಗಳ ಪ್ರದೇಶಕ್ಕೆ ಬಂದ. ಜೇನಿನ ಗುರುತಿನ ಖ್ಯಾತ ಕಾಡುಮೇಕೆಯನ್ನು ಪತ್ತೆ ಹಚ್ಚಲು ಅವನು ನಿಶ್ಚಯಿಸಿದ್ದ. ಬೆಟ್ಟಗಳ ಮಾರ್ಗಗಳಲ್ಲಿ ಅದರ ಹೊಸ ಗುರುತುಗಳು ಇವೆಯೇನೋ ಎಂದು ಶೋಧಿಸಿದ ನಂತರ ಅವನು ಮುಕರ್ತಿ ಬೆಟ್ಟಕ್ಕೆ ಹೋದ. ಅಲ್ಲಿ ಜೇನಿನ ಗುರುತಿನ ಆ ಮೇಕೆ ಬೆಟ್ಟದ ಇಳಿಜಾರಿನಲ್ಲಿ ಶಾಂತವಾಗಿ ಮೇಯುತ್ತಿದ್ದುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಅವನ ಹೃದಯದ ಬಡಿತ ಒಮ್ಮೆ ನಿಂತಂತಾಯಿತು. ತನ್ನ ದುರ್ಬೀನಿನಿಂದ ಅವನು ಮೇಕೆಯನ್ನು ದಿಟ್ಟಿಸಿ ನೋಡಿದ. ಅತ್ಯಂತ ದೊಡ್ಡ ಕೊಂಬುಗಳನ್ನು ಹೊಂದಿದ್ದ ಮೇಕೆಯೇ ಅದಾಗಿತ್ತು! ಅವನನ್ನು ಅಷ್ಟು ಸತಾಯಿಸಿದ್ದ ಪ್ರಾಣಿ ಮಂಡ್‌ಲ್ಲಿ ಎಲ್ಲರಿಗೂ ಕಾಣುವಂತೆ ಸ್ವಲ್ಪವೂ ಹೆದರಿಕೆಯಿಲ್ಲದೆ ತನ್ನ ಪಾಡಿಗೆ ತಾನು ಮೇಯುತ್ತಿದ್ದುದನ್ನು ನೋಡಿ ಅವನಿಗೆ ಇನ್ನಷ್ಟು ಆಶ್ಚರ್ಯವಾಯಿತು! ಈ ಕಾಡುಮೇಕೆ ಮತ್ತು ತೋಡರ ನಡುವೆ ಏನೋ ವಿಶೇಷ ಬಾಂಧವ್ಯವಿದೆ ಎಂಬ ಅನುಮಾನ ಈಗ ಅವನಲ್ಲಿ ಹುಟ್ಟಿತು.

ಯಾರಿಗೂ ಕಾಣದಂತೆ ಅಲ್ಲಿಂದ ಹೊರಡಲು ಬೊಕ್ಕ ಪ್ರಯತ್ನಿಸಿದ. ಆದರೆ ಅವನು ಬಂದದ್ದನ್ನು ಗಮನಿಸಿದ್ದ ಕಾರ್ನೋಜ್ ಅವನ ದಾರಿಗೆ ಅಡ್ಡವಾಗಿ ನಿಂತ. ಬೇಟೆಗಾರನ ಉದ್ದೇಶ ಏನೆಂಬುದು ಅವನಿಗೆ ಗೊತ್ತಿತ್ತು. ಅವನನ್ನು ವಿಚಾರಿಸಿಕೊಳ್ಳುವುದಕ್ಕೆ ಮೊನೆಗಾರನೇ ತಕ್ಕ ವ್ಯಕ್ತಿ ಎಂದು ಕಾರ್ನೋಜ್ ಯೋಚಿಸಿದ. ಮೋಜ್ ಬೆಳೆದ ರೀತಿ ಹಾಗೂ ಅವರೆಲ್ಲರೂ ಅದರ ಮೇಲೆ ಹೊಂದಿದ್ದ ಪ್ರೀತಿಯ ಬಗ್ಗೆ ಕೋಡನ್ ಬೊಕ್ಕನಿಗೆ ತಿಳಿಸಿದ. ಮೋಜ್‌ನನ್ನು ಕಾಪಾಡಲು ತೋಡರು ದೃಢನಿಶ್ಚಯ ಮಾಡಿದ್ದಾರೆಂಬ ಎಚ್ಚರಿಕೆಯ ಮಾತನ್ನೂ ಅವನು ಹೇಳಿದ. ಬೇರೆ ಬೇಟೆಗಾರರಿಗೂ ಈ ವಿಷಯ ತಿಳಿಸಬೇಕೆಂದು ಕೋಡನ್ ಬೊಕ್ಕನಿಗೆ ಸೂಚಿಸಿದ.

ಬೊಕ್ಕ ತೋಡರ ಮನಸ್ಸಿಗೆ ನೋವುಂಟುಮಾಡುವ ಸ್ಥಿತಿಯಲ್ಲಿರಲಿಲ್ಲ. ಅವನ ಉಪಜೀವನ ಅವರ ನಾಡಿನಲ್ಲಿ ನಡೆಯುತ್ತಿತ್ತು. ಬೊಕ್ಕನ ಕರೆಯ ಮೇರೆಗೆ ಅಲ್ಲಿಗೆ ಪುನಃ ಬಂದಿದ್ದ ರಣಜಿತ್ ಸಿಂಗ್‌ಜಿಗೆ ಏನು ಹೇಳುವುದು ಎಂಬುದು ಅವನ ಚಿಂತೆಯಾಗಿತ್ತು. ಸಿಂಗ್‌ಜೀಯನ್ನು ಬೇಟೆಯ ಹೆಸರಿನಲ್ಲಿ ಎಲ್ಲೆಲ್ಲೋ

ಅಲೆದಾಡಿಸಬಹುದಾಗಿತ್ತಾದರೂ, ಪ್ರಾಮಾಣಿಕವಾಗಿ ಇರುವ ವಿಷಯವನ್ನು ತಿಳಿಸುವುದೇ ಸರಿ ಎಂದು ಬೊಕ್ಕ ನಿರ್ಧ[illegible]. ಅವನು ಎಲ್ಲ ವಿಷಯವನ್ನು ಸಿಂಗಜೀಗೆ ಹೇಳಿದಾಗ, ಸಿಂಗ್‌ಜೀ ವಿಪರೀತ ಸಿಟ್ಟಿಗೇಳುತ್ತಾನೆ ಎಂದು ಬೊಕ್ಕ ನಿರೀಕ್ಷಿಸಿದ್ದ. ಆದರೆ ರಣಜಿತ್ ಬೊಕ್ಕನನ್ನು ತಬ್ಬಿಕೊಂಡು ಕಾಡುಮೇಕೆಯ ಬಳಿ ನನ್ನನ್ನು ಕರೆದುಕೊಂಡು ಹೋಗು ಎಂದು ಹೇಳಿದ. ಅವನು ತನ್ನ ಕ್ಯಾಮೆರಾಗಳನ್ನು ಬೊಕ್ಕನಿಗೆ ತೋರಿಸುತ್ತಾ "ನನ್ನ ಬಂದೂಕಗಳ ಸ್ಥಾನದಲ್ಲಿ ಇವುಗಳನ್ನು ಉಪಯೋಗಿಸುತ್ತೇನೆ" ಎಂದು ಹೇಳಿದ.

ಮರುದಿನ ತಾನು ಕೈಗೊಂಡ ಸಾಹಸ ಬೊಕ್ಕನಿಗೆ ಹೊಸದಾಗಿತ್ತು. ಮೋಫ್‌ಮಂಡ್‌ನ ತೋಡರಿಗೆ ತನ್ನ ಉದ್ದೇಶವನ್ನು ಮನವರಿಕೆ ಮಾಡಿಕೊಡುವುದಕ್ಕೆ ರಣಜಿತ್ ಸಿಂಗ್‌ಗೆ ಬಹಳ ಸಮಯ ಬೇಕಾಗಲಿಲ್ಲ.

ಅವರು ಅವನನ್ನು ಸ್ವಾಗತಿಸಿ, ಅವನಿಗೆ ಬೇಕಾದ ಎಲ್ಲ ನೆರವನ್ನೂ ನೀಡಿದರು. ಮೋಜ್ ಸಹ ಸಹಕಾರ ನೀಡಿತು. ಸ್ವಲ್ಪ ದೂರದಲ್ಲಿ ನಿಂತು, ಕ್ಯಾಮೆರಾ–ಬೇಟೆಗಾರ ತನ್ನ ಚಿತ್ರ ತೆಗೆದುಕೊಳ್ಳಲು ಅದು ಅವಕಾಶ



ಕೊಟ್ಟಿತು. ಜೇನು ಗುರುತಿನ ಕಾಡುಮೇಕೆಯ ಖ್ಯಾತಿ ಹರಡಿತು. ನೀಲಗಿರಿಯ ಕಾಡುಮೇಕೆಗಳು ನಶಿಸಿ ಹೋಗುವ ಅಪಾಯದಲ್ಲಿವೆ ಎಂಬುದನ್ನರಿತ ಸರ್ಕಾರ ಅವುಗಳ ಬೇಟೆಯನ್ನು ನಿಷೇಧಿಸಿ ಈ ಪ್ರಾಣಿಗಳಿಗೆ 'ವನ್ಯಜೀವಿ ರಕ್ಷಣಾ ಕಾಯಿದೆ'ಯಡಿ ಸಂಪೂರ್ಣ ರಕ್ಷಣೆಯನ್ನು ಒದಗಿಸಿತು. ಈಗ ಕಾರ್ನೋಜ್ ನೆಮ್ಮದಿಯಿಂದ ಇರುವಂತಾಯಿತು. ಕಳ್ಳತನದಿಂದ ಬೇಟೆಯಾಡುವವರ ಸಮಸ್ಯೆ ಮಾತ್ರ ಅವನಿಗೆ ಇದ್ದೇ ಇತ್ತು. ಆದರೆ ತಾನು ಮತ್ತು ತೋಡರು ಈ ಸಮಸ್ಯೆಯನ್ನು ನಿಭಾಯಿಸುವ ನಂಬಿಕೆ ಅವನಿಗಿತ್ತು.

ಮುಕರ್ತಿ ಬೆಟ್ಟದ ಮೇಲೆ ನಿಶ್ಚಿಂತೆಯಿಂದ ಒಂಟಿ ಜೀವನ ನಡೆಸಿ ಮೋಜ್ ಮುದಿಯಾಯಿತು. ಆದರೆ ಕಾಡುಮೇಕೆಗಳ ಮುಖ್ಯ ಪ್ರದೇಶದಲ್ಲಿನ ಕಾಡುಮೇಕೆಗಳ ಹಿಂಡುಗಳು ಅನೇಕ ಬದಲಾವಣೆಗಳನ್ನು ಕಾಣುತ್ತಿದ್ದವು. ಅಕೇಶಿಯಾ, ನೀಲಗಿರಿ ಎಣ್ಣೆಯ ಗಿಡ ಮತ್ತು ಪೈನ್ ತೋಟಗಳು ಹುಲ್ಲು ಬೆಳೆಯುತ್ತಿದ್ದ ಪ್ರದೇಶವನ್ನು ಒತ್ತರಿಸಿ, ಎಷ್ಟೋ ಕಡೆ ಪ್ರಸ್ಥಭೂಮಿಯ ತುದಿಯವರೆಗೂ ಬಂದವು. ಇದರಿಂದ ಹಿಂಡುಗಳ



ಓಡಾಟಕ್ಕೆ ಅಡ್ಡಿಯಾಗಿದ್ದೇ ಅಲ್ಲದೆ, ಅವು ಮೇಯುತ್ತಿದ್ದ ಸ್ಥಳಗಳೂ ಕಿರಿದಾದವು. ಇದಕ್ಕೂ ಹೆಚ್ಚಿನ ಆತಂಕದ ವಿಷಯವೆಂದರೆ ಆ ಸ್ಥಳದಲ್ಲಿ ಸ್ಥಾಪಿಸಲು ಉದ್ದೇಶಿಸಲಾದ ಒಂದು ಬೃಹತ್ ಜಲವಿದ್ಯುತ್ ಸ್ಥಾವರ. ಸಹಜವಾಗಿ ಆಶಾವಾದಿಗಳಾಗಿದ್ದ ತೋಡರು ಎಲ್ಲವೂ ಸರಿಹೋಗುತ್ತದೆ ಎಂಬ ಆಶಾಭಾವನೆಯನ್ನು ತಳೆದಿದ್ದರು.

ಧಾರಾಕಾರವಾದ ಮಳೆ, ಸದಾ ತುಂಬಿ ಹರಿಯುವ ಹೊಳೆಗಳು, ನೀರು ಸಂಗ್ರಹಿಸಿಡಬಹುದಾದ ಕಣಿವೆಗಳು ಹಾಗೂ ವಿದ್ಯುಚ್ಛಕ್ತಿಯ ಉತ್ಪಾದನೆಗೆ ನೆರವಾಗುವ ನೈಸರ್ಗಿಕ ಇಳಿಜಾರುಗಳು – ಇವುಗಳಿಂದಾಗಿ ನೀಲಗಿರಿ ಪ್ರಸ್ಥಭೂಮಿ ಜಲವಿದ್ಯುತ್ ಯೋಜನೆಗೆ ಆದರ್ಶವಾದ ಸ್ಥಳವಾಗಿತ್ತು. ಮಂಡ್‌ನ ಕೆಳಗಡೆಯ ಕಣಿವೆಯ ಅಗಲಕ್ಕೂ ಅಣೆಕಟ್ಟೆಯೊಂದರ ನಿರ್ಮಾಣ ಪ್ರಾರಂಭವಾಯಿತು. ಇದು ಒಂದು ಮುಖ್ಯ ಅಣೆಕಟ್ಟೆಯಾಗಲಿತ್ತು. ತಮ್ಮ ಹಾಲು, ತುಪ್ಪ ಮಾರಿ ತಮಗೆ ಬೇಕಾದ ದಿನಸಿ ಪದಾರ್ಥಗಳನ್ನು ಕೊಳ್ಳಲು ಊಟಿ ಪಟ್ಟಣಕ್ಕೆ ಹೋಗಬೇಕಾದರೆ ಈಗ ಸರೋವರವನ್ನು ಬಳಸಿಕೊಂಡು ತುಂಬಾ ದೂರದ ಹಾದಿಯಲ್ಲಿ ಹೋಗಬೇಕಾಗಿದೆ ಎಂಬುದನ್ನು ತೋಡರು ಅರಿಯುವಷ್ಟರಲ್ಲಿ ಸಮಯ ಮಿಂಚಿ ಹೋಗಿತ್ತು. ಇದಕ್ಕೂ ದೊಡ್ಡ ಆತಂಕದ ವಿಷಯವೆಂದರೆ ಅವರ ಜಾನುವಾರುಗಳು ಮೇಯುತ್ತಿದ್ದ ಪ್ರದೇಶವೂ ಚಿಕ್ಕದಾಯಿತು. ತೋಡರು ಇದನ್ನು ಪ್ರತಿಭಟಿಸಿದರು, ಮನವಿಪತ್ರಗಳನ್ನು ಸಲ್ಲಿಸಿದರು ಹಾಗೂ ಉಪವಾಸ ಮುಷ್ಕರವನ್ನು ಹೂಡಿದರು. ಆದರೆ ಇದು ಯಾವುದರಿಂದಲೂ ಉಪಯೋಗವಾಗಲಿಲ್ಲ. ಸರ್ಕಾರ ಅವರಿಗೆ ಸರೋವರದ ಇನ್ನೊಂದು ಬದಿಯಲ್ಲಿ ಬೇರೆ ಸ್ಥಳವನ್ನು ನೀಡಿತು. ಅದು ಮೋಫ್‌ಮಂಡ್‌ನ ಅರ್ಧದಷ್ಟೂ ಚೆನ್ನಾಗಿರಲಿಲ್ಲ. ಜಾನುವಾರುಗಳು ಮೇಯುವ ಸ್ಥಳ ಬಹಳ ಚಿಕ್ಕದಾಗಿತ್ತು. ಆದರೆ ಈ ಸ್ಥಳ ಊಟಿಗೆ, ಆಸ್ಪತ್ರೆಗಳಿಗೆ, ಪೇಟೆಗಳಿಗೆ ಮತ್ತು ಶಾಲೆಗಳಿಗೆ ಸಮೀಪವಾಗಿತ್ತು. ಆಧುನಿಕ ಭಾರತದೊಂದಿಗೆ ಸಮನಾಗಿ ಹೆಜ್ಜೆ ಇಡಲು ಶಿಕ್ಷಣ ಎಷ್ಟು ಮುಖ್ಯ ಎಂಬುದನ್ನು ತೋಡರು ತಿಳಿದುಕೊಳ್ಳಲು ಪ್ರಾರಂಭಿಸಿದರು.

ಕೋಡನ್‌ಗೆ ಮೋಫ್‌ಮಂಡ್‌ನ ನಂಟು ಅತ್ಯಂತ ಪ್ರಿಯವಾಗಿತ್ತು. ಅಲ್ಲಿಂದ ಹೋಗುವ ವಿಚಾರ ಅವನಿಗೆ ಹಿಡಿಸಲಿಲ್ಲವಾದರೂ, ಒಮ್ಮೆ ನಿರ್ಧಾರ ಕೈಗೊಂಡ ಮೇಲೆ ಹೊಸ ಸ್ಥಳಕ್ಕೆ ಹೊರಡುವ ಸಿದ್ಧತೆಗಳಲ್ಲಿ ಇತರರೊಂದಿಗೆ ತಾನೂ ಸೇರಿದ.

ಅಣೆಕಟ್ಟೆಯ ನಿರ್ಮಾಣ ಮುಗಿಯಿತು. ಮುಂದಿನ ಮುಂಗಾರಿನಲ್ಲಿ ಅಲ್ಲಿ ನೀರು ತುಂಬುವುದರಲ್ಲಿತ್ತು. ಮುಂಗಾರು ಬಹಳ ದೂರವೂ ಇರಲಿಲ್ಲ. ಹೊಸ ಸ್ಥಳದಲ್ಲಿ ತೋಡ ತರುಣ, ತರುಣಿಯರು ತಾತ್ಕಾಲಿಕ ಆಶ್ರಯವನ್ನು ವ್ಯವಸ್ಥೆ ಮಾಡಿಕೊಂಡು, ಸರ್ಕಾರದ ನೆರವಿನಿಂದ ಅಲ್ಲಿ ಇಟ್ಟಿಗೆ ಮತ್ತು ಗಾರೆಯ ಹೊಸ ಮನೆಗಳನ್ನು ಕಟ್ಟತೊಡಗಿದರು. ಇವು ಯಾವುದೇ ಹಳ್ಳಿಯ ಮನೆಗಳಂತಿದ್ದವು. ಹೊಸ ಮಂಡ್ ಯಾವುದೇ ಸಾಧಾರಣ ಕೊಪ್ಪಲಿನಂತಿತ್ತು.

ಕೋಡನ್ ಸಾಮಾನ್ಯವಾಗಿ ದನಗಾಹಿಗಿಂತಲೂ ಮೊದಲೇ ಎದ್ದು, ಸೂರ್ಯನಿಗೆ ನಮಸ್ಕಾರ

ಮಾಡುವವರಲ್ಲಿ ಮೊದಲಿಗನಾಗಿರುತ್ತಿದ್ದ. ಮಂಡ್‌ನ ಎದುರಿಗಿದ್ದ ಗುಡ್ಡದ ಮೇಲೆ ಅವನು ಸಾಮಾನ್ಯವಾಗಿ ಇರುತ್ತಿದ್ದ ಸ್ಥಳದಲ್ಲಿ ಒಂದು ದಿನ ಬೆಳಿಗ್ಗೆ ಕೋಡನ್ ಕಾಣಿಸಲಿಲ್ಲ. ಏನಾಗಿದೆಯೋ ಎಂದು ನೋಡಲು ಕಾರ್ನೋಜ್ ಅವಸರವಾಗಿ ಕೋಡನ್‌ನ ಗುಡಿಸಲಿಗೆ ಹೋಗಿ ನೋಡಿದ. ಕೋಡನ್ ಸತ್ತಿದ್ದ. ತೋಡರಿಗೆ ಬಹಳ ದುಃಖವಾಯಿತು. ತನ್ನ ಪರಿಸರದಲ್ಲಾದ ತೀವ್ರ ಬದಲಾವಣೆಗಳಿಗೆ ಹೊಂದಿಕೊಳ್ಳದ ಈ ಅಜ್ಜ ಮಾನಸಿಕ ಒತ್ತಡ ಹಾಗೂ ಹೃದಯವೇದನೆಯಿಂದ ಸತ್ತ ಎಂದು ತೋಡರು ಮಾತನಾಡಿಕೊಂಡರು.

ಕೋಡನ್ ಮೊನೆಗಾರನಾಗಿದ್ದೇ ಅಲ್ಲದೆ, ಎಲ್ಲರ ಪ್ರೀತಿ, ಗೌರವಗಳನ್ನು ಗಳಿಸಿದ್ದ ಅಜ್ಜನಾಗಿದ್ದ. ತೋಡರು ಅವನ ಅಂತ್ಯಕ್ರಿಯೆಯನ್ನು ದೊಡ್ಡ ಪ್ರಮಾಣದಲ್ಲಿ ಮಾಡಲು ಇಚ್ಛಿಸಿದರು. ಎಲ್ಲ ಮಂಡ್‌ಗಳಿಗೆ, ಬಡಗ ಮತ್ತು ಕೋಟ ಸ್ನೇಹಿತರಿಗೆ, ಅಧಿಕಾರಿಗಳಿಗೆ ಹಾಗೂ ಹಿತೈಷಿಗಳಿಗೆ ಆಹ್ವಾನಗಳನ್ನು ಕಳಿಸಲಾಯಿತು. ಗೊತ್ತಾದ ದಿನ ಅಗಲಿದ ತೋಡ ನಾಯಕನಿಗೆ ಗೌರವ ಸೂಚಿಸಲು ಜನರ ದೊಡ್ಡ ಗುಂಪು ಸೇರಿತು. ಅಂತ್ಯಕ್ರಿಯಾ ವಿಧಿಗಳು ಕೆಲವು ಮೊದಲೇ ಪ್ರಾರಂಭವಾಗಿದ್ದವು.

ಅಂತ್ಯಕ್ರಿಯೆ ಅನೇಕ ವಿಧಿಗಳಿಂದ ಕೂಡಿದ್ದಾಗಿತ್ತು. ಕೋಡನ್‌ನ ದೇಹವನ್ನು ಮೊದಲು ಅವನ ಗುಡಿಸಲಿನಲ್ಲಿಡಲಾಯಿತು. ನಂತರ ಬೇರೆ ಬೇರೆ ಸ್ಥಳಗಳಿಗೆ ಒಯ್ಯಲಾಯಿತು. ಪ್ರತಿಯೊಂದು ಸ್ಥಳದಲ್ಲೂ ಬೇರೆ ಬೇರೆ ರೀತಿಯ ವಿಧಿಗಳನ್ನು ನಡೆಸಲಾಯಿತು. ಅನೇಕ ಗಂಟೆಗಳ ನಂತರ ಅಗ್ನಿಸಂಸ್ಕಾರದ ಸ್ಥಳಕ್ಕೆ ಒಯ್ಯಲಾಯಿತು. ಕೋಟರು ಸಂಗೀತ ನುಡಿಸಿದರು. ಮುಂದಿನ ಜಗತ್ತಿಗೆ ಹೋಗುವ ದಾರಿಯಲ್ಲಿ ಮೃತರನ್ನು ಬಿಸಿಲು, ಮಳೆಯಿಂದ ರಕ್ಷಿಸಲು ಒಂದು ಛತ್ರಿಯ ಜೊತೆಗೆ ಆಹಾರ, ಹೊಗೆಸೊಪ್ಪು, ಹಣ ಮುಂತಾದುವನ್ನು ಅವನ ದೇಹದ ಜೊತೆ ಸುಡಲಾಯಿತು. ತೋಡ ಹೋಗುವ ಸ್ಥಳದಲ್ಲಿ ಸಾಕಲು ಅವನದೇ ಆದ ಎಮ್ಮೆಗಳಿರಬೇಕೆಂಬ ನಂಬಿಕೆಯಿಂದ ಹಿಂದಿನ ದಿನಗಳಲ್ಲಿ ಎಮ್ಮೆಗಳನ್ನೂ ಆಹುತಿ ಕೊಡಲಾಗುತ್ತಿತ್ತು. ಕೋಡನ್‌ನ ಸ್ಥಾನಮಾನಕ್ಕೆ ತಕ್ಕಂತೆ ಆರು ಎಮ್ಮೆಗಳನ್ನು ಆಹುತಿ ಕೊಡಬೇಕಾಗಿತ್ತು. ಈ ಪ್ರಾಣಿಗಳ ಕೊಂಬುಗಳಿಗೆ ಬೆಣ್ಣೆ ಬಳಿದು ಅವುಗಳನ್ನು ಅಂತ್ಯ ಸಂಸ್ಕಾರದ ಸ್ಥಳಕ್ಕೆ ಹೊಡೆಯಲಾಗುತ್ತಿತ್ತು. ಆ ಸಮಯದಲ್ಲಿನ ಗದ್ದಲ ಮತ್ತು ಗಲಿಬಿಲಿಯಿಂದ ಸಿಟ್ಟಿನ ಎಮ್ಮೆಗಳಿಗೆ ಹುಚ್ಚೇ ಹಿಡಿದಂತಾಗುತ್ತಿತ್ತು. ಆಗ ಅವುಗಳನ್ನು ಹಿಡಿಯುವುದೇ ಅಂತ್ಯಕ್ರಿಯೆಯ ಮೈ ನವಿರೇಳಿಸುವ ಭಾಗವಾಗಿತ್ತು. ತರುಣರು ತಮ್ಮ ಭುಜಬಲವನ್ನು ಈ ಸಂದರ್ಭದಲ್ಲಿ ಪ್ರದರ್ಶಿಸುತ್ತಿದ್ದರಲ್ಲದೆ ಅನೇಕ ಸಲ ತೀವ್ರವಾಗಿ ಗಾಯಗೊಳ್ಳುತ್ತಿದ್ದರು. ಪ್ರಾಣಿಗಳನ್ನು ಬಲಿ ಕೊಡುವುದನ್ನು ಸರ್ಕಾರ ನಿಷೇಧಿಸಿದ್ದರಿಂದ ಎಮ್ಮೆಗಳನ್ನು ಕೊಲ್ಲದೆಯೇ ಈ ವಿಧಿಯನ್ನು ಆಚರಿಸಲಾಗುತ್ತಿತ್ತು. ಒಂದು ನಿರ್ದಿಷ್ಟ ಶೋಲ ಮರದ ರೆಂಬೆಗಳನ್ನು ತಿಕ್ಕುವ ಮೂಲಕ ಉಂಟಾದ ಬೆಂಕಿಯಿಂದ ಅಗ್ನಿಸ್ಪರ್ಶ ಮಾಡಲಾಗುತ್ತಿತ್ತು. ಸತ್ತ ಮನುಷ್ಯನ ಕೂದಲಿನ ಒಂದು ಎಳೆ, ಅವನ ತಲೆಬುರುಡೆಯ ಒಂದು ಭಾಗ ಮುಂತಾದ ಗುರುತುಗಳನ್ನು ಸಂಗ್ರಹಿಸುವುದರೊಂದಿಗೆ ಅಂತ್ಯಕ್ರಿಯೆ ಮುಗಿಯಿತು.

ಕೋಡನ್‌ನ ಉತ್ತರಾಧಿಕಾರಿಯಾಗಿ ಕಾರ್ನೋಜನನ್ನು ಮೊನೆಗಾರನಾಗಿ ನೇಮಕ ಮಾಡಲಾಯಿತು. ಅವನ ಇತರ ಚಿಂತೆಗಳಲ್ಲಿ ಮೋಜ್‌ನ ಬಗ್ಗೆ ಕಳವಳವೂ ಸೇರಿತ್ತು. ಮೋಜ್ ತನ್ನ ಸಂಗಾತಿಗಳಿಂದ ದೂರವಾಗಿ ಯಾವ ರಕ್ಷಣೆಯೂ ಇಲ್ಲದೆ ಮುಕರ್ತಿಯಲ್ಲಿ ಒಂಟಿಯಾಗಿ ಇರುವುದು ಅವನಿಗೆ ಇಷ್ಟವಿರಲಿಲ್ಲ. ಕಾರ್ನೋಜ್ ತನ್ನ ಜನರೊಂದಿಗೆ ಈ ವಿಷಯವನ್ನು ಚರ್ಚಿಸಿದ ನಂತರ ಮೋಜ್‌ನನ್ನು ಮುಖ್ಯ ಪರ್ವತಶಿಖರಗಳಿಗೆ ಅಟ್ಟುವುದೇ ಅತ್ಯುತ್ತಮ ಉಪಾಯ ಎಂಬ ಒಮ್ಮತಕ್ಕೆ ಬರಲಾಯಿತು. ಮುಂಗಾರು–ಪೂರ್ವದ ಸಣ್ಣ ಮಳೆ ಬಿತ್ತು. ಅಲ್ಲಿಂದ ಹೊರಡುವುದಕ್ಕೆ ಸಿದ್ಧವಾಗುವಂತೆ ಮೋಫ್‌ಮಂಡ್‌ನ ಜನರಿಗೆ ಅದು ಎಚ್ಚರಿಕೆಯಾಯಿತು.

ಹಿರಿಯರೊಂದಿಗೆ ಸಮಾಲೋಚಿಸಿ ಕಾರ್ನೋಜ್ ಕೈಗೊಳ್ಳಬೇಕಾಗಿದ್ದ ಮತ್ತೊಂದು ತೀರ್ಮಾನವೆಂದರೆ ಕೋಡನ್‌ನ 'ಒಣ' ಅಂತ್ಯಕ್ರಿಯೆಯನ್ನು ಕುರಿತಾದದ್ದು.

ಈ ಎರಡನೆಯ ಅಂತ್ಯಕ್ರಿಯೆಗೆ ಸಂಪ್ರದಾಯ ಯಾವುದೇ ಕಾಲಮಿತಿಯನ್ನು ವಿಧಿಸಿರಲಿಲ್ಲ. ಇಬ್ಬರು ಅಥವಾ ಅದಕ್ಕೂ ಹೆಚ್ಚು ಸಂಖ್ಯೆಯ ಮೃತರಿಗೆ ಇದನ್ನು ಯಾವಾಗಲಾದರೂ ಮಾಡಬಹುದಾಗಿತ್ತು ಅಥವಾ ಮಾಡದೆಯೂ ಇರಬಹುದಾಗಿತ್ತು. ಕೋಡನ್‌ಗೆ ಎರಡನೆಯ ಅಂತ್ಯಕ್ರಿಯೆಯ ಮರ್ಯಾದೆಯನ್ನು ಮಾಡಲು ಮೋಫ್‌ಮಂಡ್‌ನ ತೋಡರು ಉತ್ಸುಕರಾಗಿದ್ದರು. ಮೋಫ್‌ಮಂಡ್‌ಗೆ ವಿದಾಯ ಹೇಳಲೂ ಅದರಿಂದ ಅವರಿಗೆ ಅವಕಾಶವಾಗುತ್ತಿತ್ತು.

'ಒಣ' ಅಂತ್ಯಕ್ರಿಯೆ ಅನೇಕ ರೀತಿಗಳಲ್ಲಿ, ಅದಕ್ಕೆ ಮೊದಲು ನಡೆಸುವ 'ಹಸಿರು' ಅಂತ್ಯಕ್ರಿಯೆಯಂತೆಯೇ ಇರುತ್ತದೆ. ಮುಖ್ಯವಾದ ವ್ಯತ್ಯಾಸವೆಂದರೆ ಎರಡನೆಯದರಲ್ಲಿ ಮೊದಲ ಅಂತ್ಯಕ್ರಿಯೆಯಲ್ಲಿ ಸಂಗ್ರಹಿಸಿದ ಅವಶೇಷಗಳಿಗೆ ಸಾಂಪ್ರದಾಯಿಕವಾಗಿ ಅಗ್ನಿಸಂಸ್ಕಾರ ಮಾಡಲಾಗುವುದು. ಜನರು ದೊಡ್ಡ ಸಂಖ್ಯೆಯಲ್ಲಿ ಸೇರುತ್ತಾರೆ. ಕೋಟ ವಾದ್ಯವೃಂದ ಮೊಳಗಿದಂತೆ, ತೋಡ ಕವಿಗಳು ಸತ್ತ ಹಿರಿಯನ ಗುಣಗಾನ ಮಾಡುತ್ತಾರೆ. ಮೋಫ್‌ಮಂಡ್‌ನ ಭಾವಪರವಶತೆಯ ಹಾಡುಗಳನ್ನೂ, ಅಲ್ಲಿಯ ಸುಖಸಂತೋಷದ ಹಾಡುಗಳನ್ನೂ ಹಾಡಲಾಗುತ್ತದೆ. ಎಲ್ಲ ವಿಧಿಗಳೂ ಮುಗಿದ ಮೇಲೆ ಗುಂಪು ಚದುರುತ್ತದೆ.

ಮೋಫ್‌ಮಂಡ್‌ನ ತೋಡರಿಗೆ ಮಂಡ್‌ನೊಂದಿಗೆ ಈಗ ಉಳಿದಿದ್ದ ಒಂದೇ ನಂಟೆಂದರೆ ಮೋಜ್ ಅಣೆಕಟ್ಟೆಯಲ್ಲಿ ನೀರು ಸಂಗ್ರಹವಾಗತೊಡಗಿತು. ಸುತ್ತುಬಳಸು ದಾರಿಯಲ್ಲಿ ಹೋಗುವುದನ್ನು ತಪ್ಪಿಸಲು ತೋಡರು ಬೇಗ ಮಂಡ್ ಬಿಡಬೇಕಾಗಿತ್ತು. ಅವರ ಸಾಮಾನುಗಳಲ್ಲಿ ಹೆಚ್ಚಿನದನ್ನು ಹೊಸ ಸ್ಥಳಕ್ಕೆ ಸಾಗಿಸಲಾಗಿತ್ತು. ಎಮ್ಮೆಗಳು ಹಾಗೂ ದೈನಂದಿನ ಬಳಕೆಯ ಕೆಲವು ವಸ್ತುಗಳು ಮಾತ್ರ ಉಳಿದಿದ್ದವು. ಮೋಜ್ ಮುಕರ್ತಿ ಬೆಟ್ಟದ ಇಳಿಜಾರಿನಲ್ಲಿ ಮೇಯುತ್ತಿದ್ದಾಗಲೇ ಕಾರ್ನೋಜ್ ಮತ್ತು ಕೂಚ್ ಬೆಟ್ಟದ ಶಿಖರವನ್ನು ಹತ್ತಿ ಮೋಜ್ ಅಲ್ಲಿಗೆ ಬರದಂತೆ ತಡೆಯುವುದು; ನಂತರ ಉಳಿದ ತೋಡರು ಮೋಜ್‌ನನ್ನು ಪರ್ವತಗಳ ಕೋಡುಗಳ ಕಡೆ ಅಟ್ಟುವುದೆಂದು ತೋಡರು ಮಾತನಾಡಿಕೊಂಡರು. ಯಾರು ಯಾರು ಎಲ್ಲೆಲ್ಲಿ

ನಿಲ್ಲುವುದು ಎಂಬ ಬಗ್ಗೆ ಅವರು ಚರ್ಚಿಸುತ್ತಿದ್ದಾಗ, ಆ ಪೈಕಿ ಒಬ್ಬ ಇದ್ದಕ್ಕಿದ್ದಂತೆ "ಅಲ್ಲಿ ನೋಡಿ! ಅಲ್ಲಿ ನೋಡಿ!" ಎಂದು ಕೂಗಿದ. ಮೋಜ್ ಶಿಖರದಿಂದ ಕೆಳಗಿಳಿದು ಬರುತ್ತಿತ್ತು.

ಅದು ಮುಂದೆ ಮುಂದೆ ಬರತೊಡಗಿತು. ಈ ಸುದ್ದಿ ಮಂಡ್‌ನಲ್ಲಿ ಹರಡಿತು. ಹೆಂಗಸರು ಮತ್ತು ಮಕ್ಕಳು ಹೊರಗಡೆ ಬಂದರು. ಮಂಡ್ ಅನ್ನು ಸಮೀಪಿಸಿದ ಕೂಡಲೇ ಮೋಜ್ ನಿಂತಿತು. ಅದು ನಿಂತಿದ್ದ ಜನರನ್ನು ಸ್ವಲ್ಪ ಹೊತ್ತು ದಿಟ್ಟಿಸಿ ನೋಡಿತು. ಪ್ರತಿಯೊಬ್ಬರೂ ಉಸಿರು ಬಿಗಿ ಹಿಡಿದು ನೋಡತೊಡಗಿದರು. ಒಂದು ಮಗುವೂ ಸಹ ಕಮಕ್ ಎನ್ನಲಿಲ್ಲ. ಪರ್ವಗಳ ಚೇತನವೇ ಅವರನ್ನು ಆಶೀರ್ವದಿಸಲು ಬಂದಂತಿತ್ತು ಆ ದೃಶ್ಯ. ನಂತರ ದೂರದಲ್ಲಿದ್ದ ಪರ್ವತಗಳ ಶಿಖರಗಳ ಕಡೆ ಮುಖ ಮಾಡಿ, ಮೋಜ್ ನಿಧಾನವಾಗಿ, ಆಯಾಸದಿಂದ ಹೋಗತೊಡಗಿತು. ಆ ಜನರ ಗುಂಪಿನಲ್ಲಿ ಒದ್ದೆಯಾಗದ ಕಣ್ಣುಗಳೇ ಇರಲಿಲ್ಲ. ಕೆಲವರಂತೂ ಬಿಕ್ಕಿಬಿಕ್ಕಿ ಅತ್ತರು. ಜೇನು ಗುರತಿನ ಮುದಿ ಮೇಕೆಯನ್ನು ಬೀಳ್ಕೊಡುವುದರೊಂದಿಗೆ ಮುಂದೆಂದೂ ಮರಳಿ ಬಾರದ ಶಕೆಯೊಂದನ್ನೂ ತಾವು ಬೀಳ್ಕೊಡುತ್ತಿದ್ದೇವೆ ಎಂಬುದನ್ನು ತೋಡರು ಅರಿತಿದ್ದರು.

"ಹೊಗೆಯ ನಡುವೆಯೂ ನನಗೆ ದೀಪ ಉರಿಯುತಿದೆ
ಮೋಡಗಳ ನಡುವೆಯೂ ನನಗೆ ಸೂರ್ಯ ಹೊಳೆಯುತಿದೆ."



